KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮಾರ್ಚ್ ೧೧, ೨೦೧೦ (ಫಾಲ್ಗುಣ ೨೦, ಶಕ ವರ್ಷ ೧೯೩೧) | ಸಂಚಿಕೆ ೧೦ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಕಛೇರಿ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ನಂ. 7, ಉಪ ವಿಭಾಗ, ಸೊರಬ**

**ಸುತ್ತೋಲೆ**

**ನಂ.ಸಕಾಇಂ/ಲೋಇ/ಸೊರಬ/ಉವಿ/ಮಾಹಿತಿ ಹಕ್ಕು/ 2009–10/770–77, ದಿನಾಂಕ:5ನೇ ಫೆಬ್ರವರಿ, 2010**

ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 5(1) ರ ಅಡಿಯಲ್ಲಿ ಇಲಾಖಾ ಮುಖ್ಯಸ್ಥರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿನ ಕಾರ್ಯವಿಧಾನದ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡಲು ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ:ಸಿ.ಬಿ.ಎಸ್./ ಮಾಹಿತಿ ಹಕ್ಕು ಕೈಪಿಡಿ/2005/ಇ.ಎಸ್.ಎಲ್/05–06/ದಿನಾಂಕ:19–09–2005ರ ಪ್ರಕಾರ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರಾದ ಶ್ರೀ ಎಸ್.ಡಿ. ವಿಶ್ವನಾಥ, ನಂ.7 ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ ವಿಭಾಗ ಸೊರಬ. ಇವರು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ (ಎಸ್.ಪಿ.ಐ.ಓ) ನೇಮಕಗೊಂಡಿದ್ದು, ಮಾಹಿತಿ ನೀಡುವ ಪ್ರಕ್ರಿಯೆಯು ಸುಲಲಿತವಾಗಿ ನಡೆಯಲು ಅನುಕೂಲವಾಗುವಂತೆ ಶ್ರೀ ಅನಿಲ್ ಕುಮಾರ್, ಸಹಾಯಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ನಂ.7ನೇ ಉಪ ವಿಭಾಗ ಸೊರಬ. ಇವರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ) ಯಾಗಿ ನೇಮಕಗೊಳಿಸಲಾಗಿದೆ.

ಈ ಕಛೇರಿಯ ಮಾಹಿತಿಗಳನ್ನು ಸಾರ್ವಜನಿಕರಿಗೆ ನೀಡುವ ಸಲುವಾಗಿ ಮಾಹಿತಿ ಹಕ್ಕು ಕೈಪಿಡಿ–2005 ನ್ನು ಈ ಮೂಲಕ ಪರಿಷ್ಕರಿಸಿ ಹೊರಡಿಸಲಾಗಿದೆ.

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ನಂ.7 ಲೋ.ಬಂ ಮತ್ತು ಒ.ಜ.ಸಾ.ಇಲಾಖೆ,
ಉಪ ವಿಭಾಗ, ಸೊರಬ.

**ನಮೂನೆ**

**ಮಾಹಿತಿ ಹಕ್ಕು ಅಧಿನಿಯಮ 2005**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋ. ಬಂ, ಮತ್ತು ಒ.ಜ.ಸಾ. ಇಲಾಖೆ, ನಂ, 7 ಉಪ ವಿಭಾಗ ಸೊರಬ**

ಮಾಹಿತಿ ಹಕ್ಕು ಅಧಿನಿಯಮ 2005 ಸೆಕ್ಷನ್ 5(1)(2)ರ ಅಡಿಯಲ್ಲಿ ಈ ಕಛೇರಿಯಿಂದ ನೇಮಿಸಲಾದ ಅಧಿಕಾರಿಗಳು ಸಾರ್ವಜನಿಕ ಸಂಪರ್ಕ ಅಧಿಕಾರಿಗಳಾಗಿರುತ್ತಾರೆ.

ಈ ಕಛೇರಿಯಲ್ಲಿ ಮಾಹಿತಿ ದಾಖಲೆಗಳನ್ನು ನೀಡುವ ಅಧಿಕಾರಿಗಳು ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1)ರ ಪ್ರಕಾರ.

| ಅಧಿಕಾರಿ ಹೆಸರು | ಪದನಾಮ |
|---|---|
| ಶ್ರೀ ಎಸ್.ಡಿ. ವಿಶ್ವನಾಥ | ಸಹಾಯಕ ಕಾರ್ಯಪಾಲಕ ಇಂಜಿನಿಯರ್<br>ನಂ.7 ಲೋ.ಬಂ ಮತ್ತು ಒ.ಜ.ಸಾ.ಇಲಾಖೆ,<br>ಉಪ ವಿಭಾಗ, ಸೊರಬ.<br>ದೂರವಾಣಿ ಸಂ: 08184–272319 |

**ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) ರ ಪ್ರಕಾರ**

| ಅಧಿಕಾರಿ ಹೆಸರು | ಪದನಾಮ |
|---|---|
| ಶ್ರೀ ಅನಿಲ್ ಕುಮಾರ್ | ಸಹಾಯಕ ಇಂಜಿನಿಯರ್<br>ನಂ.7 ಲೋ.ಬಂ ಮತ್ತು ಒ.ಜ.ಸಾ.ಇಲಾಖೆ,<br>ಉಪ ವಿಭಾಗ, ಸೊರಬ.<br>ದೂರವಾಣಿ ಸಂ: 08184–272319 |

ಮೇಲಿನ ಅಧಿಕಾರಿಗಳು ಮಾಹಿತಿಯನ್ನು 30 ದಿನಗಳೊಳಗಾಗಿ ನೀಡದಿದ್ದಲ್ಲಿ ಅಥವಾ ಸಹಕರಿಸದಿದ್ದಲ್ಲಿ ದೂರನ್ನು ಮತ್ತು ಮೇಲ್ಮನವಿಯನ್ನು ಸೆಕ್ಷನ್ 19(1)ರ ಪ್ರಕಾರ ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.

ಕಾರ್ಯಪಾಲಕ ಇಂಜಿನಿಯರ್,
ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

**ಕರ್ತವ್ಯದ ಹಾಜರಾತಿ**

ದಿನಾಂಕ: 01–04–2009

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ – 2005 ಸೆಕ್ಷನ್ 5(1) ರ ಪ್ರಕಾರ ಶ್ರೀ ಎಸ್.ಡಿ. ವಿಶ್ವನಾಥ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಆದ ನಾನು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಐ.ಓ) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 01–04–2009 ರಿಂದ ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

**ಎಸ್.ಡಿ. ವಿಶ್ವನಾಥ**
ಸಹಾಯಕ ಕಾರ್ಯಪಾಲಕ ಇಂಜಿನಿಯರ್
ನಂ.7 ಲೋ.ಬಂ ಮತ್ತು ಒ.ಜ.ಸಾ.ಇಲಾಖೆ,
ಉಪ ವಿಭಾಗ, ಸೊರಬ.

**ಕರ್ತವ್ಯದ ಹಾಜರಾತಿ**

ದಿನಾಂಕ: 01–04–2009

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ – 2005 ಸೆಕ್ಷನ್ 5(2) ರ ಪ್ರಕಾರ ಶ್ರೀ ಅನಿಲ್ ಕುಮಾರ್ ಸಹಾಯಕ ಇಂಜಿನಿಯರ್ ಆದ ನಾನು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 01–04–2009 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

**ಅನಿಲ್ ಕುಮಾರ್**
ಸಹಾಯಕ ಇಂಜಿನಿಯರ್
ನಂ.7 ಲೋ.ಬಂ ಮತ್ತು ಒ.ಜ.ಸಾ.ಇಲಾಖೆ,
ಉಪ ವಿಭಾಗ, ಸೊರಬ.

ಮೇಲಿನ ಅಧಿಕಾರಿಗಳು ಮಾಹಿತಿಯನ್ನು 30 ದಿನಗಳೊಳಗಾಗಿ ನೀಡದಿದ್ದ ಪಕ್ಷದಲ್ಲಿ ಅಥವಾ ಸಹಕರಿಸದಿದ್ದಲ್ಲಿ ದೂರನ್ನು ಮತ್ತು ಮೇಲ್ಮನವಿಯನ್ನು ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.

ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ನಂ.7 ಲೋ.ಬಂ ಮತ್ತು ಒ.ಜ.ಸಾ.ಇಲಾಖೆ,
ಉಪ ವಿಭಾಗ, ಸೊರಬ.

**ಸುವರ್ಣ ಕರ್ನಾಟಕ – 2005**

**ಕರ್ನಾಟಕ ಸರ್ಕಾರ**

**(ಲೋಕೋಪಯೋಗಿ ಇಲಾಖೆ)**

**ಮಾಹಿತಿ ಹಕ್ಕು ಕೈಪಿಡಿ – 2005**

**ಸೆಕ್ಷನ್ 4 (1) (ಬಿ) ಅನ್ವಯ**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಕಛೇರಿ –**
**ಲೋಕೋಪಯೋಗಿ, ಬಂದರು ಮತ್ತು ಒಳನಾಡು**
**ಜಲಸಾರಿಗೆ ಇಲಾಖೆ, ನಂ. 7, ಉಪ ವಿಭಾಗ**
**ಸೊರಬ. ಶಿವಮೊಗ್ಗ ಜಿಲ್ಲೆ**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ನಂ. 7, ಉಪ ವಿಭಾಗ ಸೊರಬ. ಶಿವಮೊಗ್ಗ ಜಿಲ್ಲೆ.**

**ಪ್ರಕಟಣೆ**

| | |
|---|---|
| 1 | ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, ನಿಯಮಗಳು 2005 ದಿನಾಂಕ: 11–10–2005 ಮತ್ತು ಪರಿಷ್ಕರಣೆ ದಿನಾಂಕ: 31–05–2009 ರಲ್ಲಿ ಇದ್ದಂತೆ |
| 2 | ಮಾಹಿತಿ ಕೋರಿಕೆ ಅರ್ಜಿಗಳನ್ನು ನಿಗಧಿತ ನಮೂನೆಯಲ್ಲಿ ಸಲ್ಲಿಸಬೇಕು. ಅರ್ಜಿ ನಮೂನೆಯನ್ನು ಉಚಿತವಾಗಿ ಈ ಕಛೇರಿಯ ಸಾರ್ವಜನಿಕ ಮಾಹಿತಿ ಹಕ್ಕು ವಿಭಾಗದಿಂದ ಪಡೆಯಬಹುದು. |
| 3 | ಸರಿಯಾಗಿ ಭರ್ತಿ ಮಾಡಿದ ಅರ್ಜಿಯನ್ನು ಈ ಕಛೇರಿಯ ಸಾರ್ವಜನಿಕ ಟಪಾಲು ಸ್ವೀಕೃತಿ ವಿಭಾಗದಲ್ಲಿ ಸಲ್ಲಿಸಬೇಕು ಮತ್ತು ಸ್ವೀಕೃತಿಯನ್ನು ತಪ್ಪದೇ ಪಡೆಯಬೇಕು ಮತ್ತು ರೂ. 10.00 ಅರ್ಜಿ ಶುಲ್ಕವನ್ನು ಪಾವತಿಸತಕ್ಕದ್ದು. |
| 4 | ಅರ್ಜಿಯಲ್ಲಿ ಕೋರಿದ ಮಾಹಿತಿಯನ್ನು ಒದಗಿಸಲು ಅವಕಾಶವಿದ್ದಲ್ಲಿ ಸಂದಾಯ ಮಾಡಬೇಕಾದ ಶುಲ್ಕದ ಮಾಹಿತಿಯನ್ನು ನಿಮಗೆ 7 ದಿನಗಳ ಒಳಗೆ ತಿಳಿಸಲಾಗುವುದು. |
| 5 | ಶುಲ್ಕ ಪಾವತಿಸಿದ ದಿನಾಂಕದಿಂದ 30 ದಿನಗಳೊಳಗೆ ಕೋರಿದ ಮಾಹಿತಿಯನ್ನು ಒದಗಿಸಲಾಗುತ್ತದೆ. |
| 6 | ಅರ್ಜಿಯಲ್ಲಿ ಕೋರಿದ ಮಾಹಿತಿಯನ್ನು ಒದಗಿಸಲು ಅವಕಾಶವಿಲ್ಲದಿದ್ದಲ್ಲಿ 15 ದಿನಗಳೊಳಗೆ ತಿಳಿಸಲಾಗುವುದು. |
| 7 | ನಿಗಧಿತ ಕಾಲಾವಧಿಯಲ್ಲಿ ಮಾಹಿತಿ ಅಥವಾ ಸೂಚನೆ ನೀಡದಿದ್ದಲ್ಲಿ ಅಥವಾ ಆದೇಶದಿಂದ ಅರ್ಜಿದಾರರು ಬಾಧಿತರಾದಲ್ಲಿ 30 ದಿನಗಳೊಳಗೆ ಮೇಲ್ಮನವಿ ಪ್ರಾಧಿಕಾರಕ್ಕೆ ಮೇಲ್ಮನವಿ ಸಲ್ಲಿಸಬಹುದು. |
| 8 | ಮಾಹಿತಿ ನೀಡಲು ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ನಂ.7 ಉಪ ವಿಭಾಗ, ಸೊರಬ ಇವರು ಸಕ್ಷಮ ಪ್ರಾಧಿಕಾರಿಯಾಗಿರುತ್ತಾರೆ. |
| 9 | ಮೇಲ್ಮನವಿ ಸಲ್ಲಿಸಲು ಕಾರ್ಯಪಾಲಕ ಇಂಜಿನಿಯರ್, ಲೋ.ಇ. ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರು ಮೇಲ್ಮನವಿ ಪ್ರಾಧಿಕಾರಿಯಾಗಿರುತ್ತಾರೆ. |
| 10 | ಹೆಚ್ಚಿನ ವಿವರಗಳಿಗೆ ಮೇಲ್ಕಂಡ ಅಧಿಕಾರಿಗಳನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು |

ದಿನಾಂಕ: 01–04–2009.
ಸ್ಥಳ : ಸೊರಬ

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ನಂ.7 ಲೋ.ಬಂ ಮತ್ತು ಒ.ಜ.ಸಾ.ಇಲಾಖೆ,
ಉಪ ವಿಭಾಗ, ಸೊರಬ.

**ಕರ್ನಾಟಕ ಸರ್ಕಾರ**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ**

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಾಹಿತಿ ಹಕ್ಕು ಕೈಪಿಡಿ – 2005 ಸೆಕ್ಷನ್ 4(1) (ಬಿ) ಅನ್ವಯ**

**1. ಸಂಸ್ಥೆ ಬಗ್ಗೆ ವಿವರಗಳು – ಕಾರ್ಯಗಳು ಮತ್ತು ಕರ್ತವ್ಯಗಳು**

(ಅ) ಸಂಸ್ಥೆಯ ಹೆಸರು – ಲೋ.ಇ.ನಂ.7 ಉಪ ವಿಭಾಗ, ಸೊರಬ.

(ಆ) ರಚನೆ –

ಸಹಾಯಕ ಕಾರ್ಯಪಾಲಕ ಇಂಜಿನಿಯರ್ – 1.

| ತಾಂತ್ರಿಕ ಶಾಖೆ | ಆಡಳಿತ ಶಾಖೆ | ಪ್ರವಾಸಿ ಮಂದಿರದ ಸಿಬ್ಬಂದಿ ಶಾಖೆ |
|---|---|---|
| ಸಹಾಯಕ ಇಂಜಿನಿಯರ್ – 2 | ಪ್ರ.ದ.ಸ. – 1 | ಮೇಟಿ – 1 (ಖಾಲಿ ಇದೆ) |
| ಕಿರಿಯ ಇಂಜಿನಿಯರ್ – 2 | ದ್ವಿ.ದ.ಸ. – 2 | ವಾಟರ್‌ಬಾಯ್ – 1<br>(ನಿಯೋಜನೆ ಶಿವಮೊಗ್ಗ ವೃತ್ತ ಶಿವಮೊಗ್ಗ) |
| ವರ್ಕ್ ಇನ್ಸ್‌ಪೆಕ್ಟರ್ – 1 | ಗ್ರೂಪ್ ' ಡಿ ' – 2 | ಸ್ವೀಪರ್ – 1 |

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ನಂ.7 ಲೋ.ಬಂ ಮತ್ತು ಒ.ಜ.ಸಾ.ಇಲಾಖೆ,
ಉಪ ವಿಭಾಗ, ಸೊರಬ.

**ಕಾರ್ಯಗಳು ಮತ್ತು ಕರ್ತವ್ಯಗಳು**

ಸೊರಬ ತಾಲ್ಲೂಕು ಲೋಕೋಪಯೋಗಿ ಇಲಾಖೆ ವ್ಯಾಪ್ತಿಯಲ್ಲಿ ಬರುವ ಕಟ್ಟಡಗಳು, ರಸ್ತೆಗಳು ಹಾಗೂ ಸಾರ್ವಜನಿಕ ಆಸ್ತಿ–ಪಾಸ್ತಿಗಳಿಗೆ ಸಂಬಂಧಿಸಿದ ಆಡಳಿತಾತ್ಮಕ ಆರ್ಥಿಕ ಹಾಗೂ ಸೇವೆಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ನಿರ್ವಹಿಸಲಾಗುತ್ತದೆ ಹಾಗೂ ಸೊರಬ ತಾಲ್ಲೂಕಿಗೆ ಸಂಬಂಧಿಸಿದಂತೆ ಒಳಗೊಂಡಿರುತ್ತದೆ.

2. ಅಧಿಕಾರಿಗಳು ಮತ್ತು ಸಿಬ್ಬಂಧಿಯವರ ಕರ್ತವ್ಯಗಳು :–

**(1) ಸಹಾಯಕ ಕಾರ್ಯಪಾಲಕ ಇಂಜಿನಿಯರ್– 1 :–**

ಸೊರಬ ತಾಲ್ಲೂಕು ಲೋ.ಇ. ಉಪವಿಭಾಗದ ವ್ಯಾಪ್ತಿಗೆ ಒಳಗೊಂಡಂತೆ ಸೊರಬ ತಾಲ್ಲೂಕಿಗೆ ಅಧಿಕೃತ ಮುಖ್ಯಸ್ಥರಾಗಿದ್ದು, ಸರ್ಕಾರಿ ನಿಯಮಗಳ ಚೌಕಟ್ಟಿನಲ್ಲಿ ಹಾಗೂ ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಾವಳಿಗೆ ಒಳಪಟ್ಟ ಪ್ರಕರಣಗಳ ವಿಲೇವಾರಿ ಮತ್ತು ಎಲ್ಲಾ ವ್ಯವಹಾರದ ಜವಾಬ್ದಾರಿ ಹೊಂದಿರುತ್ತಾರೆ ಹಾಗೂ ಅಧೀನ ಸಿಬ್ಬಂಧಿಯ ಮೇಲ್ವಿಚಾರಣೆ ಮತ್ತು ನಿಯಂತ್ರಣ ಅಧಿಕಾರ ಹೊಂದಿರುತ್ತಾರೆ..

**(2) ಸಹಾಯಕ ಇಂಜಿನಿಯರ್ – 1 :–**

ಸೊರಬ ತಾಲ್ಲೂಕಿನ ಉಳವಿ ಮತ್ತು ಕಸಬಾ ಹೋಬಳಿಗಳ ವ್ಯಾಪ್ತಿಯಲ್ಲಿ ಬರುವ ಲೋಕೋಪಯೋಗಿ ಇಲಾಖೆ ಕಾಮಗಾರಿಗಳು, ರಸ್ತೆ, ಕಟ್ಟಡ, ಸೇತುವೆ ಇತ್ಯಾದಿಗಳ ಉಸ್ತುವಾರಿ ಮತ್ತು ಅದಕ್ಕೆ ಸಂಬಂಧಪಟ್ಟಂತೆ ಅಂದಾಜು ಪಟ್ಟಿಗಳನ್ನು ತಯಾರಿಸುವುದು. ಅಂದರೆ ದಾಖಲೆಗಳನ್ನು ಸಿದ್ದಪಡಿಸುವುದು. ನಿಯತಕಾಲಿಕ ವರದಿಗಳನ್ನು ಉಪವಿಭಾಗ ಕಛೇರಿಗೆ ಸಲ್ಲಿಸುವುದು ಮತ್ತು ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವಹಿಸಿದ ಇತರೆ ಕೆಲಸಗಳನ್ನು ನಿರ್ವಹಿಸುವುದು. ಗುತ್ತಿಗೆದಾರರ ಬಿಲ್ಲುಗಳನ್ನು ಸಿದ್ದಪಡಿಸುವುದು ಅಳತೆಗಳನ್ನು ಅಳತೆ ಪುಸ್ತಕದಲ್ಲಿ ದಾಖಲಿಸುವುದು.

**(3) ಸಹಾಯಕ ಇಂಜಿನಿಯರ್ – 2 :–**

ಸೊರಬ ತಾಲ್ಲೂಕಿನ ಕಸಬಾ ಮತ್ತು ಚಂದ್ರಗುತ್ತಿ ಹೋಬಳಿಗಳ ವ್ಯಾಪ್ತಿಯಲ್ಲಿ ಬರುವ ಲೋಕೋಪಯೋಗಿ ಇಲಾಖೆ ಕಾಮಗಾರಿಗಳು, ರಸ್ತೆ, ಕಟ್ಟಡ, ಸೇತುವೆ ಇತ್ಯಾದಿಗಳ ಉಸ್ತುವಾರಿ ಮತ್ತು ಅದಕ್ಕೆ ಸಂಬಂಧಪಟ್ಟಂತೆ ಅಂದಾಜು ಪಟ್ಟಿಗಳನ್ನು ತಯಾರಿಸುವುದು. ಅಂದರೆ ದಾಖಲೆಗಳನ್ನು ಸಿದ್ದಪಡಿಸುವುದು. ನಿಯತಕಾಲಿಕ ವರದಿಗಳನ್ನು ಉಪವಿಭಾಗ ಕಛೇರಿಗೆ ಸಲ್ಲಿಸುವುದು ಮತ್ತು ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವಹಿಸಿದ ಇತರೆ ಕೆಲಸಗಳನ್ನು ನಿರ್ವಹಿಸುವುದು. ಗುತ್ತಿಗೆದಾರರ ಬಿಲ್ಲುಗಳನ್ನು ಸಿದ್ದಪಡಿಸುವುದು ಅಳತೆಗಳನ್ನು ಅಳತೆ ಪುಸ್ತಕದಲ್ಲಿ ದಾಖಲಿಸುವುದು.

**(4) ಕಿರಿಯ ಇಂಜಿನಿಯರ್–1**

ಸೊರಬ ತಾಲ್ಲೂಕಿನ ಆನವಟ್ಟಿ ಮತ್ತು ಜಡೆ ಹೋಬಳಿಗಳ ವ್ಯಾಪ್ತಿಯಲ್ಲಿ ಬರುವ ಲೋಕೋಪಯೋಗಿ ಇಲಾಖೆ ಕಾಮಗಾರಿಗಳು, ರಸ್ತೆ, ಕಟ್ಟಡ, ಸೇತುವೆ ಇತ್ಯಾದಿಗಳ ಉಸ್ತುವಾರಿ ಮತ್ತು ಅದಕ್ಕೆ ಸಂಬಂಧಪಟ್ಟ ಅಂದಾಜು ಪಟ್ಟಿಗಳನ್ನು ತಯಾರಿಸುವುದು. ಟೆಂಡರ್ ದಾಖಲೆಗಳನ್ನು ಸಿದ್ಧಪಡಿಸುವುದು. ನಿಯತಕಾಲಿಕ ವರದಿಗಳನ್ನು ಉಪವಿಭಾಗ ಕಛೇರಿಗೆ ಸಲ್ಲಿಸುವುದು ಗುತ್ತಿಗೆದಾರರ ಬಿಲ್ಲುಗಳನ್ನು ಸಿದ್ಧಪಡಿಸುವುದು ಅಳತೆಗಳನ್ನು ಅಳತೆ ಪುಸ್ತಕದಲ್ಲಿ ದಾಖಲಿಸಿ ಪಾವತಿಗಾಗಿ ಸ.ಕಾ.ಇಂ. ರವರಿಗೆ ಸಲ್ಲಿಸುವುದು. ಅದಲ್ಲದೆ ಸ.ಕಾ.ಇಂ.ರವರು ವಹಿಸಿದ ಇತರೆ ಕೆಲಸಗಳು.

**(5) ಕಿರಿಯ ಇಂಜಿನಿಯರ್–2**

ಡಿ.ಎಂ.: ಉಪವಿಭಾಗ ಶಾಖೆಯ ಮಾಸಿಕ ಎಂ.ಎಂ.ಆರ್. ಮೀಟಿಂಗ್ ಪತ್ರಗಳನ್ನು ಕ್ರೋಢೀಕರಿಸಿ ಸಲ್ಲಿಸುವುದು. ಎಲ್.ಎ.ಕ್ಯೂ.ಎಲ್.ಸಿ.ಕ್ಯೂ. ಪತ್ರಗಳ ವ್ಯವಹಾರ ನಿರ್ವಹಣೆ, ರಸ್ತೆಗಳ ನಕ್ಷೆ ನಿರ್ವಹಣೆ ಕಟ್ಟಡ ಸೇತುವೆಗಳ ಬಗ್ಗೆ ಮತ್ತು ರಸ್ತೆಗಳಲ್ಲಿ ಚಲಿಸುವ ವಾಹನಗಳ ಗಣಕೀಕರಣ ಬಗ್ಗೆ ವರದಿ ಸಲ್ಲಿಕೆ.

**(6) ಕಿರಿಯ ಇಂಜಿನಿಯರ್–3 (ತಾತ್ಕಾಲಿಕ ನಿಯೋಜನೆ–1)**

ಕಾರ್ಯಪಾಲಕ ಇಂಜಿನಿಯರ್, ಲೋ.ಇ. ಶಿವಮೊಗ್ಗ ವಿಭಾಗ, ಶಿವಮೊಗ್ಗ ಕಛೇರಿಯಿಂದ ಈ ಉಪವಿಭಾಗ ಕಛೇರಿಯಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದು, ಸೊರಬ ತಾಲ್ಲೂಕಿನ ಕುಪ್ಪಗಡ್ಡೆ, ಜಡೆ ಮತ್ತು ಉಳವಿ ಹೋಬಳಿಗಳ ವ್ಯಾಪ್ತಿಯಲ್ಲಿ ಬರುವ ಲೋಕೋಪಯೋಗಿ ಇಲಾಖೆ ಕಾಮಗಾರಿಗಳು, ರಸ್ತೆ, ಸೇತುವೆ ಮತ್ತು ಸೊರಬ ಪಟ್ಟಣದಲ್ಲಿ ಕಟ್ಟಡ ಕಾಮಗಾರಿ ಇತ್ಯಾದಿಗಳ ಉಸ್ತುವಾರಿ ಮತ್ತು ಅದಕ್ಕೆ ಸಂಬಂಧಪಟ್ಟಂತೆ ಅಂದಾಜು ಪಟ್ಟಿಗಳನ್ನು ತಯಾರಿಸುವುದು. ಟೆಂಡರ್ ದಾಖಲೆಗಳನ್ನು ಸಿದ್ಧಪಡಿಸುವುದು. ನಿಯತಕಾಲಿಕ ವರದಿಗಳನ್ನು ಉಪವಿಭಾಗ ಕಛೇರಿಗೆ ಸಲ್ಲಿಸುವುದು ಗುತ್ತಿಗೆದಾರರ ಬಿಲ್ಲುಗಳನ್ನು ಸಿದ್ಧಪಡಿಸುವುದು ಅಳತೆಗಳನ್ನು ಅಳತೆ ಪುಸ್ತಕದಲ್ಲಿ ದಾಖಲಿಸಿ ಪಾವತಿಗಾಗಿ ಸ.ಕಾ.ಇಂ. ರವರಿಗೆ ಸಲ್ಲಿಸುವುದು. ಅದಲ್ಲದೆ ಸ.ಕಾ.ಇಂ.ರವರು ವಹಿಸಿದ ಇತರೆ ಕೆಲಸಗಳು.

**(7) ಪ್ರಥಮ ದರ್ಜೆ ಸಹಾಯಕ–1:**

ಆಡಳಿತ ಶಾಖೆಯ ಪತ್ರ ವ್ಯವಹಾರ ಉಪವಿಭಾಗ ಕಛೇರಿಯ ಕಾಮಗಾರಿ ಮತ್ತು ಸಾಮಾನ್ಯ ನಗದು ಪುಸ್ತಕ ನಿರ್ವಹಣೆ, ಮಂಜೂರಾದ ಕಾಮಗಾರಿ ಬಿಲ್ಲುಗಳ ಪ್ರಿ ಆಡಿಟ್ ಮಾಡುವುದು, ಸಿಬ್ಬಂದಿ ವೆಚ್ಚದ ವರದಿ ಸಲ್ಲಿಸುವುದು. ರಹಸ್ಯ ವರದಿಗಳ ನಿರ್ವಹಣೆ, ರಶೀದಿ ಪುಸ್ತಕ ಚಲನ್ ನಿರ್ವಹಣೆ, ಸಿಬ್ಬಂದಿ ವರ್ಗದ ಸೇವಾ ಪುಸ್ತಕ ನಿರ್ವಹಣೆ, ಸ.ಕಾ.ಇಂ., ರವರು ನಿರ್ದೇಶಿಸುವ ಯಾವುದೇ ಕೆಲಸಗಳು.

**(8) ದ್ವಿತೀಯ ದರ್ಜೆ ಸಹಾಯಕ–1:**

ಉಗ್ರಾಣ ಶಾಖೆಗೆ ಸಂಬಂಧಿಸಿದ ವ್ಯವಹಾರ ಮಾಸಿಕ ಲೆಕ್ಕ ಪತ್ರ ಸದ್ಯಕ್ಕೆ ಅರ್ಧವಾರ್ಷಿಕ, ವಾರ್ಷಿಕ ವರದಿ ಸಲ್ಲಿಕೆ, ಉಗ್ರಾಣ ಶಾಖೆಗೆ ಸಂಬಂಧಿಸಿದ ಇತರೆ ಕಡತಗಳ ವಿಲೇವಾರಿ, ಕಾಮಗಾರಿಗೆ ಸಂಬಂಧಿಸಿದ ಪತ್ರ ವ್ಯವಹಾರ ಮತ್ತು ಅಧಿಕಾರಿ/ ಸಿಬ್ಬಂದಿಗಳ ವೇತನ ಬಿಲ್ಲು ತಯಾರಿಕೆ ಹಾಗೂ ಸಲ್ಲಿಕೆ, ಸ.ಕಾ.ಇಂ. ರವರು ನಿರ್ದೇಶಿಸುವ ಕೆಲಸಗಳು.

**(9) ದ್ವಿತೀಯ ದರ್ಜೆ ಸಹಾಯಕ–2:**

ಆಮದು ಮತ್ತು ರಫ್ತು ವಹಿ ನಿರ್ವಹಣೆ, ಉದ್ಯೋಗ ವಿನಿಮಯ ಕಛೇರಿಯ ವರದಿಗಳ ಸಲ್ಲಿಕೆ. ಕಛೇರಿಯ ಅಧಿಕಾರಿ/ ಸಿಬ್ಬಂದಿಯವರ ಪ್ರಯಾನ ಭತ್ಯೆ ಬಿಲ್ಲುಗಳನ್ನು ತಯಾರಿಸುವುದು ಹಾಗೂ ಸ.ಕಾ.ಇಂ. ರವರು ನಿರ್ದೇಶಿಸುವ ಕೆಲಸಗಳು.

**(10) ಗ್ರೂಪ್ 'ಡಿ'–1:**

ಕಛೇರಿಯ ಎಲ್ಲಾ ಕೊಠಡಿಗಳನ್ನು ಶುಚಿಯಾಗಿಡುವುದು. ಕಡತಗಳ ವಿಲೇವಾರಿ ಬಗ್ಗೆ ಅಧಿಕಾರಿ: ಸಿಬ್ಬಂದಿಯವರಿಗೆ ಸಹಕರಿಸುವುದು, ತಲುಪಿಸುವುದು. ಖಜಾನೆಗೆ ಬಿಲ್ಲುಗಳನ್ನು ಸಲ್ಲಿಸುವುದು.

**(11) ಗ್ರೂಪ್ 'ಡಿ'–2:**

ಕಛೇರಿಯ ಜೀಪು ಚಾಲನೆಗೆ ಮಂಜೂರಾದ ಹುದ್ದೆಯಿಲ್ಲದ ಕಾರಣ ಸದರಿ ನೌಕರರು ವಾಹನ ಚಾಲನೆಗೆ ಅವಶ್ಯವಿರುವ ದಾಖಲಾತಿಗಳನ್ನು ಹೊಂದಿರುವ ಕಾರಣ ಉಪ ವಿಭಾಗದ ಜೀಪು ಚಾಲನೆಗೆ ತಾತ್ಕಾಲಿಕವಾಗಿ ನಿಯೋಜಿಸಿದೆ.

**(12) ವರ್ಕ್ ಇನ್ಸ್‌ಪೆಕ್ಟರ್ :–**

ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರು ಸೂಚಿಸಿರುವಂತೆ ಶಾಖಾಧಿಕಾರಿಗಳ ಕಾಮಗಾರಿ ಕಾರ್ಯ ನಡೆಯುವ ಸಮಯದಲ್ಲಿ ಸ್ಥಳದಲ್ಲಿದ್ದು ಉಸ್ತುವಾರಿ ನಿರ್ವಹಣೆ, ಹಾಗೂ ಪ್ರತಿನಿತ್ಯ ಈ ಕಾಮಗಾರಿ ಬಗ್ಗೆ ಸಂಬಂಧಪಟ್ಟ ಶಾಖಾಧಿಕಾರಿಗಳಿಗೆ ವರದಿ ಮಾಡುವುದು.

**(13) ಪ್ರವಾಸಿ ಮಂದಿರದ ಸಿಬ್ಬಂದಿ :–**

**(1) ಮೇಟಿ :–** ಖಾಲಿ

**(2) ವಾಟರ್‌ಬಾಯ್ :–** ವೃತ್ತ ಕಛೇರಿಯಲ್ಲಿ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಿಸುತ್ತಿದ್ದಾರೆ.

**(3) ಸ್ವೀಪರ್ :–** ಪ್ರವಾಸಿ ಮಂದಿರದ ಆವರಣ , ಕೊಠಡಿ , ಶೌಚಾಲಯ ಶುಚಿತ್ವದ ನಿರ್ವಹಣೆ.

**4. ಕಾರ್ಯನಿರ್ವಹಿಸುವವರಿಗೆ ಅನುಸರಿಸುವ ಮಾನದಂಡಗಳು :–**

ಕೆ.ಪಿ.ಡಬ್ಲ್ಯೂ.ಡಿ.'ಡಿ' ಕೋಡ್ ಮತ್ತು ಕೆ.ಪಿ.ಡಬ್ಲ್ಯೂ.ಡಿ.ಎ. ಕೋಡ್ ಕರ್ನಾಟಕ ಆಕ್ಟ್ – 2002 ರಲ್ಲಿ ನಿಗಧಿಪಡಿಸಿರುವ ಮಾನದಂಡಗಳನ್ನು ಅನುಸರಿಸುವುದು.

**5. ಕಾರ್ಯಗಳನ್ನು ನಿರ್ವಹಿಸುವಲ್ಲಿ ಇಲಾಖೆಯ ಸಿಬ್ಬಂದಿ ಹೊಂದಿರುವ ಅಥವಾ ಉಪಯೋಗಿಸುವ ನಿಯಮಗಳು, ನಿಬಂಧನೆಗಳು, ಸೂಚನೆಗಳು, ಕೈಪಿಡಿ ಮತ್ತು ದಾಖಲೆಗಳು :–**

(ಅ) ಕರ್ನಾಟಕ ನಾಗರೀಕ ಸೇವಾ ನಿಯಮಗಳು –ನ 1958

(ಆ) ಕರ್ನಾಟಕ ಆರ್ಥಿಕ ಸಂಹಿತೆ ನಿಯಮ

(ಇ) ಖಜಾನೆ ಸಂಹಿತೆ

(ಈ) ಸಾದಿಲ್ವಾರ್ ವೆಚ್ಚದ ಕೈಪಿಡಿ

(ಉ) ಕೆ.ಪಿ.ಡಬ್ಲ್ಯೂ.ಡಿ ' ಎ ' ಕೋಡ್

(ಊ) ಕೆ.ಪಿ.ಡಬ್ಲ್ಯೂ.ಡಿ . ' ಡಿ ' ಕೋಡ್

(ಋ) ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮಗಳು 1966

(ಎ) ಕರ್ನಾಟಕ ನಾಗರೀಕ ಸೇವೆಗಳು (ಸಿ.ಸಿ.ಎ) ನಿಯಮಗಳು 1957

(ಏ) ಕಾರ್ಯಾಲಯದ ಕೈಪಿಡಿ

(ಐ) ಉಗ್ರಾಣದ ಕೈಪಿಡಿ

(ಒ) ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ನಿಯಮಗಳು (ಆದೇಶ 2–2–01)

(ಓ) ಲೋ.ಇ. ಮತ್ತು ನೀರಾವರಿ ಇಲಾಖಾ ಅಧಿಕಾರಿ ಪ್ರತ್ಯಾಯೋಜನೆ ನಿಯಮಗಳು (ಆದೇಶ 15–12–1984)

(ಔ) ಸೇವಾ ವಿಷಯಗಳು ಇತ್ಯಾದಿ ವಿಚಾರದಲ್ಲಿ ಸಿಬ್ಬಂದಿ ಆಡಳಿತ ಸುಧಾರಣೆ ಇಲಾಖೆ ಆರ್ಥಿಕ ಇಲಾಖೆ, ಲೋ.ಇ. ಹೊರಡಿಸಿದ ಆದೇಶ, ಸುತ್ತೋಲೆ ಸೂಚನೆಗಳು

(ಅಂ). ಇಲಾಖಾ ಮುಖ್ಯಸ್ಥರು ಹೊರಡಿಸಿದ ಸುತ್ತೋಲೆ ಮತ್ತು ಆದೇಶಗಳು

**6. ಇಲಾಖೆಯು ಹೊಂದಿರುವ ದಸ್ತಾವೇಜುಗಳ ಪಟ್ಟಿ**

1. ವಿಷಯ ವಹಿ/ಸಿಬ್ಬಂದಿ ವಹಿ
2. ನಗದು ಪುಸ್ತಕ ವಹಿ.
3. ವಸತಿಗೃಹ ಬಾಡಿಗೆ ವಹಿ.
4. ರವಾನೆವಹಿ/ಆಮದುವಹಿ
5. ಸ್ಥಳೀಯ ಬಟವಾಡೆ ಪುಸ್ತಕ
6. ಆಕಸ್ಮಿಕ ರಜಾ ವಹಿ
7. ನೌಕರರ ಸೇವಾ ವಹಿ
8. ಇನ್‌ಕಂಬೆನ್ಸಿ ವಹಿ
9. ವಿಧಾನ ಸಭಾ/ವಿಧಾನ ಪರಿಷತ್ ಪ್ರಶ್ನೆಗಳಿಗೆ ಸಂಬಂಧಿಸಿದ ರಿಜಿಸ್ಟರ್
10. ನ್ಯಾಯಾಲಯ/ಕೆ.ಎ.ಟಿ. ಪ್ರಕರಣಗಳ ಕಡತ

11. ಆಯವ್ಯಯ ಅಂದಾಜು ಪಟ್ಟಿ ಕಡತ
12. ಇಲಾಖಾ ಕಟ್ಟಡ, ರಸ್ತೆ ಮತ್ತು ಸೇತುವೆಗಳ ಅಂಕಿ ಅಂಶದ ರಿಜಿಸ್ಟರ್
13. ನಿವೃತ್ತಿ ವೇತನ ನಿಗಾ ವಹಿ
14. ಕಾರ್ಯನಿರ್ವಹಣಾ (ರಹಸ್ಯ) ವರದಿಗಳ ದಾಖಲು ವಹಿ
15. ಟಿ ಆಂಡ್ ಪಿ ಸ್ವೀಕೃತಿ ವಹಿ.
16. ಟಿ ಆಂಡ್ ಪಿ ನೀಡಿಕೆ ವಹಿ.
17. ಉಗ್ರಾಣ ದಾಸ್ತಾನು ವಹಿ.
18. ಉಗ್ರಾಣ ನೀಡಿಕೆ ವಹಿ.
19. ಎಸ್.ಬಿ.ಆರ್. ವಹಿ.
20. ಸ್ಟಾಂಪ್ ವಹಿ.
21. ತುಂಡುಗುತ್ತಿಗೆ ಪ್ರಸ್ತಾವನೆ ವಹಿ.
22. ನೌಕರರ ಸೇವಾ ಪುಸ್ತಕಗಳು.
23. ಅರ್ಧವಾರ್ಷಿಕ ದಾಸ್ತಾನು ವಹಿ.
24. ವಾರ್ಷಿಕ ಟಿ ಆಂಡ್ ಪಿ ವಹಿ.

7. **ನೀತಿ ನಿಯಮಗಳನ್ನು ರೂಪಿಸಲು ಸಾರ್ವಜನಿಕರೊಂದಿಗೆ ಸಮಾಲೋಚಿಸಲು ಅಸ್ತಿತ್ವದಲ್ಲಿರುವ ಕಾರ್ಯವಿಧಾನದ ವಿವರಗಳು.**

ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನಾಗಿ ಉಪವಿಭಾಗದ ಮುಖ್ಯಸ್ಥರಾದ ಶ್ರೀ ಎಸ್.ಡಿ. ವಿಶ್ವನಾಥ ಸ.ಕಾ.ಇಂ. ಇವರನ್ನು ಮತ್ತು ಸಹಾಯಕ ಮಾಹಿತಿ ಅಧಿಕಾರಿಯನ್ನಾಗಿ ಶ್ರೀ ಅನಿಲ್ ಕುಮಾರ್ ಸಹಾಯಕ ಇಂಜಿನಿಯರ್ ಇವರನ್ನು ನೇಮಕ ಮಾಡಲಾಗಿದೆ. ಇವರು ಸಂಬಂಧಿಸಿದ ಸಾರ್ವಜನಿಕ ವ್ಯಕ್ತಿಗಳಿಂದ ದೂರು ಆಕ್ಷೇಪಣೆಗಳನ್ನು ಆಹ್ವಾನಿಸಿ ಪರಿಶೀಲಿಸುತ್ತಾರೆ.

8. ಸರ್ಕಾರದ ಒಂದು ಭಾಗವಾಗಿ ಅಥವಾ ಸಲಹೆಗಳನ್ನು ಪಡೆಯುವ ಎರಡು ಅಥವಾ ಹೆಚ್ಚು ವ್ಯಾಪ್ತಿಗಳನ್ನೊಳಗೊಂಡ ಮಂಡಳಿ, ಪರಿಷತ್ತು ಸಮಿತಿ ಮತ್ತು ಇತರೆ ಅಂಗಗಳು ಮತ್ತು ಅವುಗಳ ಸಭೆಗಳು ಸಾರ್ವಜನಿಕ ಪ್ರದೇಶಕ್ಕೆ ಮುಕ್ತವಾಗಿದೆಯೆ ಅಥವಾ ಈ ಸಭಾ ನಡವಳಿಗಳು ಸಾರ್ವಜನಿಕರಿಗೆ ದೊರಕುತ್ತಿವೆಯೇ ಎಂಬ ಬಗ್ಗೆ ವಿವರಣೆ.

– ಯಾವುದು ಇರುವುದಿಲ್ಲ –

9. ಸಹಾಯಕ ಕಾರ್ಯಪಾಲಕ ಇಂಜಿನಿಯರ್, ನಂ.7, ಲೋಕೋಪಯೋಗಿ ಇಲಾಖೆ, ಉಪವಿಭಾಗ ವ್ಯಾಪ್ತಿಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರ ದೂರವಾಣಿ ಸಂಖ್ಯೆ ವಿವರ.

| ಕ್ರ. ಸಂ. | ಹೆಸರು ಶ್ರೀಯುತರಾದ | ಹುದ್ದೆ | ಕಛೇರಿ | ದೂರವಾಣಿ ಸಂಖ್ಯೆ | |
|---|---|---|---|---|---|
| | | | | ಮನೆ | ಮೊಬೈಲ್ |
| 1 | ಎಸ್.ಡಿ. ವಿಶ್ವನಾಥ | ಸ.ಕಾ.ಇಂ. (29–08–08ರಿಂದ) | 272319 | – | 9449833655 |
| 2 | ಅನಿಲ್ ಕುಮಾರ್ | ಸ.ಇಂ. | “ | | 9448185421 |
| 3 | ಹೆಚ್. ರಾಮಚಂದ್ರಪ್ಪ | ಸ.ಇಂ. | “ | | 9481193201 |
| 4 | ಬಿ. ಓಂಕಾರನಾಯ್ಕ್ | ಕಿ.ಇಂ. | “ | | 9448852979 |
| 5 | ವಿ.ಆರ್.ರಾಜೇಂದ್ರ ಪ್ರಸಾದ್ | ಕಿ.ಇಂ. | “ | 270426 | 9901346471 |
| 6 | ಮುತ್ತಪ್ಪ | ಪ್ರ.ದ.ಸ. | “ | – | 9480768548 |
| 7 | ಎಸ್.ಇ. ನೀಲಪ್ಪ | ದ್ವಿ.ದ.ಸ. | “ | | 9008520566 |
| 8 | ಶಾಂತವೀರ | ದ್ವಿ.ದ.ಸ. | “ | | 9740897093 |
| 9 | ಕೆ. ಶ್ರೀಧರ್ | ಕಿ.ಕೆ.ನಿ. | “ | 272930 | 9241327789 |

| ಕ್ರ. ಸಂ. | ಹೆಸರು ಶ್ರೀಯುತರಾದ | ಹುದ್ದೆ | ಕಛೇರಿ | ದೂರವಾಣಿ ಸಂಖ್ಯೆ | |
|---|---|---|---|---|---|
| | | | | ಮನೆ | ಮೊಬೈಲ್ |
| 10 | ಟಿ. ಹೆನ್ರಿ | ' ಡಿ ' ದರ್ಜೆ | " | | 9448921659 |
| 11 | ಪಾಂಡು | ' ಡಿ ' ದರ್ಜೆ | " | | 9449573606 |

ಪ್ರವಾಸಿ ಮಂದಿರದ ಸಿಬ್ಬಂದಿ

| ಕ್ರ.ಸಂ. | ಹೆಸರು ಶ್ರೀಯುತರಾದ | ಹುದ್ದೆ | ಕಛೇರಿ | ದೂರವಾಣಿ ಸಂಖ್ಯೆ | |
|---|---|---|---|---|---|
| | | | | ಮನೆ | ಮೊಬೈಲ್ |
| 12 | ಗುತ್ಯಮ್ಮ | ಸ್ವೀಪರ್ | 272319 | | – |
| 13 | ನಾಗರಾಜ ಭಟ್ ಎಸ್.ಬಿ. | ವಾಟರ್ ಬಾಯ್ | 272319 | | – |
| | ಪ್ರತಿ ನಿಯೋಜನಾ ಸಿಬ್ಬಂದಿ (ಶಿವಮೊಗ್ಗ ವಿಭಾಗ ಕಛೇರಿಯಿಂದ ಈ ಕಛೇರಿಗೆ) | | | | |
| 1 | ಶ್ರೀಪಾದ ಜೆ. | ಕಿ.ಇಂ. | 272319 | | 9448500249 |

**10**. ನಿಯಮಾನುಸಾರ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ಪಡೆಯುತ್ತಿರುವ ಮಾಸಿಕ ವೇತನದ ವಿವರಗಳು.

| ಕ್ರ.ಸಂ. | ಹೆಸರು ಮತ್ತು ಹುದ್ದೆ | ವೇತನ ಶ್ರೇಣಿ | ಮೂಲ ವೇತನ |
|---|---|---|---|
| 1 | ಎಸ್.ಡಿ. ವಿಶ್ವನಾಥ, ಸ.ಕಾ.ಇಂ. | 14050–25050 | 23850 |
| 2 | ಅನಿಲ್ ಕುಮಾರ್, ಸ.ಇಂ. | 11400–21600 | 13350 |
| 3 | ಹೆಚ್. ರಾಮಚಂದ್ರಪ್ಪ ಸ.ಇಂ. | 11400–21600 | 12650 |
| 4 | ಬಿ. ಓಂಕಾರನಾಯ್ಕ್ ಕಿ.ಇಂ. | 8825–16000 | 9750 |
| 5 | ವಿ.ಆರ್. ರಾಜೇಂದ್ರ ಪ್ರಸಾದ್, ಕಿ.ಇಂ. | 8825–16000 | 9275 |
| 6 | ಮುತ್ತಪ್ಪ ಪ್ರ.ದ.ಸ. | 8825–16000 | 12000 |
| 7 | ಎಸ್.ಇ. ನೀಲಪ್ಪ , ದ್ವಿ.ದ.ಸ. | 6250–12000 | 7800 |
| 8 | ಶಾಂತವೀರ | 5800–10500 | 6000 |
| 9 | ಕೆ. ಶ್ರೀಧರ್ , ಕಿ.ಕೆ.ನಿ. | 7275–13350 | 12300 |
| 10 | ಟಿ. ಹೆನ್ರಿ , ' ಡಿ ' ದರ್ಜೆ | 5200–8200 | 7450 |
| 11 | ಪಾಂಡು , ' ಡಿ ' ದರ್ಜೆ | 5200–8200 | 6250 |
| | ಪ್ರವಾಸಿ ಮಂದಿರದ ಸಿಬ್ಬಂದಿ | | |
| 12 | ಗುತ್ಯಮ್ಮ , ಸ್ವೀಪರ್ | 4800–7275 | 6250 |
| | ನಿಯೋಜನೆ ಮೇಲೆ ಇರುವ ನೌಕರರು (ವೃತ್ತ ಕಛೇರಿ ಶಿವಮೊಗ್ಗದಲ್ಲಿ) | | |
| 13 | ಎಸ್.ಬಿ. ನಾಗರಾಜಭಟ್ , ವಾಟರ್ ಬಾಯ್ | 4800–7275 | 7100 |
| | ಪ್ರತಿನಿಯೋಜನಾ ಸಿಬ್ಬಂದಿ | | |
| 14 | ಶ್ರೀಪಾದ ಜೆ. ಕಿ.ಇಂ. | 8825–16000 | 11700 |

11. 2009–2010ನೇ ಸಾಲಿನ ಆಯವ್ಯಯದಲ್ಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಉಪವಿಭಾಗ ಸೊರಬ ವಿವಿಧ ಯೋಜನಾವಾರು ವಿವಿಧ ಲೆಕ್ಕ ಶೀರ್ಷಿಕೆಯಡಿಯಲ್ಲಿ ನಿಗಧಿಪಡಿಸಲಾದ ಅನುದಾನದ ವಿವರಗಳು.

| ಕ್ರ.ಸಂ. | ಲೆಕ್ಕ ಶೀರ್ಷಿಕೆ | 2008–09 ರ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| **1** | **2** | **3** |
| 1 | 3054 – 12ನೇ ಹಣಕಾಸು | 63.11 |
| 2 | 4059 – ಲೋಕೋಪಯೋಗಿ ಇಲಾಖಾ ಕಟ್ಟಡಗಳು | 60.00 |
| 3 | 4059 – ಜಿಲ್ಲಾಡಳಿತ | 70.00 |
| 4 | 4059 – ಇತರೆ ಇಲಾಖೆ | 450.00 |
| 5 | 4202 – ತಾಂತ್ರಿಕ ಶಿಕ್ಷಣ | 200.00 |
| 6 | 4216 – ವಸತಿಗೃಹ, ಅಗ್ನಿರಕ್ಷಣೆ ಮತ್ತು ನಿಯಂತ್ರಣ ಇಲಾಖೆ | 70.00 |
| **ಕ್ರ.ಸಂ.** | **ಲೆಕ್ಕ ಶೀರ್ಷಿಕೆ** | **2009–10 ರ ಅನುದಾನ (ರೂ.ಲಕ್ಷಗಳಲ್ಲಿ)** |
| 1 | ನಬಾರ್ಡ್ ಅಡಿಯಲ್ಲಿ ಪದವಿಪೂರ್ವ ಕಾಲೇಜು ನಿರ್ಮಾಣ. | 30.24 |
| 2 | ನಂಜುಂಡಪ್ಪ ವರದಿ ಅಡಿಯಲ್ಲಿ | 193.75 |
| 3 | 5054 – ನಬಾರ್ಡ್ ಗ್ರಾಮೀಣ ರಸ್ತೆ ನಿರ್ಮಾಣ (ಟಿಎಸ್‌ಪಿ) | 0.77 |
| 4 | 5054 – ಇತರೆ ರಸ್ತೆ ನಿರ್ಮಾಣ (ಟಿಎಸ್‌ಪಿ) | 1.64 |
| 5 | 5054 – (ಯೋಜನೆ) ಕೆಶಿಪ್ | 10.67 |
| 6 | 5054 – (ಯೋಜನೆ) ನಬಾರ್ಡ್ ಗ್ರಾಮೀಣ ರಸ್ತೆ ನಿರ್ಮಾಣ | 3.21 |
| 7 | 5054 – (ಯೋಜನೆ) ಇತರೆ ರಸ್ತೆ ನಿರ್ಮಾಣ | 7.72 |
| 8 | 5054 – (ಯೋಜನೆ) ಕೆಶಿಪ್ ಟಿಎಸ್‌ಪಿ | 20.06 |
| 9 | 2059 – (ಯೋಜನೇತರ) ನಿರ್ವಹಣೆ | 11.00 |
| 10 | 2216 – ನಿರ್ವಹಣೆ (ಯೋಜನೇತರೆ) ವಸತಿ | 2.78 |
| 11 | ಸುವರ್ಣ ರಸ್ತೆ ವಿಕಾಸ ಯೋಜನೆಯಡಿ | 104.16 |

12. ಸಹಾಯ ಧನ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ವಿಧಾನ , ಅದಕ್ಕಾಗಿ ನಿಗಧಿಗೊಳಿಸಲಾದ ಮೊತ್ತ ಮತ್ತು ಫಲಾನುಭವಿಗಳ ವಿವರ.

-- ಯಾವುದೂ ಇರುವುದಿಲ್ಲ --

13. ರಿಯಾಯಿತಿಗಳನ್ನು ಪಡೆದವರ : ಅಧಿಕಾರ ಪತ್ರಗಳನ್ನು ಮಂಜೂರು ಮಾಡಿದ ಬಗ್ಗೆ ವಿವರಗಳು.

-- ಯಾವುದೂ ಇರುವುದಿಲ್ಲ --

14. ವಿದ್ಯುನ್ಮಾನ ವ್ಯವಸ್ಥೆಯಲ್ಲಿ ಲಭ್ಯವಿರುವ ಮಾಹಿತಿಗಳ ವಿವರ .

-- ಯಾವುದೂ ಇರುವುದಿಲ್ಲ --

15. ಸಾರ್ವಜನಿಕ ಉಪಯೋಗಕ್ಕಾಗಿ ಪುಸ್ತಕ ಭಂಡಾರ ಅಥವಾ ವಾಚನಾಲಯವನ್ನು ನಿರ್ವಹಿಸುತ್ತಿದ್ದಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಅಲ್ಲಿ ದೊರೆಯುವ ಮತ್ತು ಕೆಲಸದ ಅವಧಿಯ ವಿವರಗಳು.

-- ಯಾವುದೂ ಇರುವುದಿಲ್ಲ --

**16. ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು , ಹುದ್ದೆ ಇತ್ಯಾದಿಗಳ ವಿವರಗಳು :–**

ಮಾಹಿತಿ ಹಕ್ಕು ಅಧಿನಿಯಮ 2005 (ಕೇಂದ್ರ ಅಧಿನಿಯಮ ನಂ.22)ರ ಸೆಕ್ಷನ್ 5(1), 5(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಲೋಕೋಪಯೋಗಿ ಇಲಾಖೆಗೆ ಸಂಬಂಧಿಸಿದಂತೆ ಉಪ ವಿಭಾಗ ಕಛೇರಿಯ ಕೆಳಕಂಡ ಅಧಿಕಾರಿಗಳನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದು ನೇಮಕಾತಿ ಮಾಡಲಾಗಿದೆ.

(ಎ) ಶ್ರೀ ಎಸ್.ಡಿ. ವಿಶ್ವನಾಥ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸೆಕ್ಷನ್ 5(1) ರಂತೆ ಸಾರ್ವಜನಿಕ ಮಾಹಿತಿ ಅಧಿಕಾರಿ.

(ಏ) ಶ್ರೀ ಅನೀಲ್ ಕುಮಾರ್ ಸಹಾಯಕ ಇಂಜಿನಿಯರ್ ಸೆಕ್ಷನ್ 5(2) ರಂತೆ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ.

**17. ನಿಗಧಿಗೊಳಿಸಲಾಗುವ ಇತರೆ ಮಾಹಿತಿಗಳು :–**

ಸರ್ಕಾರದ ಮಾಹಿತಿ ಪಡೆಯುವ ಹಕ್ಕು ಅಧಿನಿಯಮಗಳನ್ನು ರಚಿಸಿದ ನಂತರ ಅದರಲ್ಲಿ ಬೇರೆ ಯಾವುದಾದರೂ ಮಾಹಿತಿಗಳನ್ನು ನಿಗಧಿಗೊಳಿಸಿದ್ದಲ್ಲಿ ಅದನ್ನು ಅಳವಡಿಸಲಾಗುವುದು.

**ಎಸ್.ಡಿ. ವಿಶ್ವನಾಥ**

ಪಿ.ಆರ್.265

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ನಂ.7 ಲೋ.ಬಂ ಮತ್ತು ಒ.ಜ.ಸಾ.ಇಲಾಖೆ,
ಉಪ ವಿಭಾಗ, ಸೊರಬ.

## ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪವಿಭಾಗ, ಶಿಗ್ಗಾಂವ

## ಮಾಹಿತಿ ಹಕ್ಕು ಕೈಪಿಡಿ–2005 ಸೆಷನ್ 4ಬಿ ಅನ್ವಯ 4ಬಿ(i)

## ಸಂಸ್ಥೆಯ ವಿವರ

4ಬಿ (i) ಲೋಕೋಪಯೋಗಿ ಇಲಾಖೆಯ ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ಉ) ಧಾರವಾಡ, ಅಧೀಕ್ಷಕ ಅಭಿಯಂತರರು, ಧಾರವಾಡ ವೃತ್ತ, ಧಾರವಾಡ ಮತ್ತು ಹಾವೇರಿ ಕಾರ್ಯಪಾಲಕ ಅಭಿಯಂತರರು ಇವರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಕಛೇರಿಯಾದ ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪವಿಭಾಗ, ಶಿಗ್ಗಾಂವ ಕಛೇರಿಯಾಗಿರುತ್ತದೆ.

ಈ ಉಪವಿಭಾಗದ ವ್ಯಾಪ್ತಿಯಲ್ಲಿ ಒಟ್ಟು 99.49 ಕಿಮೀ ರಾಜ್ಯ ಹೆದ್ದಾರಿ, 62.51 ಕಿಮೀ ಜಿಲ್ಲಾ ಮುಖ್ಯ ರಸ್ತೆ ಹಾಗೂ 122.40 ಕಿಮೀ ಮೇಲ್ದರ್ಜೆಗೇರಿಸಲಾದ ಜಿಲ್ಲಾ ಮುಖ್ಯರಸ್ತೆಗಳು ಹಾಗೂ ಸರ್ಕಾರಿ ಕಟ್ಟಡಗಳು ಉಸ್ತುವಾರಿ ಮತ್ತು ನಿರ್ವಹಣೆ ಹಾಗೂ ಕಾಮಗಾರಿಗಳನ್ನು ಒಳಗೊಂಡಿರುತ್ತದೆ.

ಕಛೇರಿಯ ತಾಣ: ಪರಿವೀಕ್ಷಣಾ ಮಂದಿರದ ಆವರಣ ಶಿಗ್ಗಾಂವ ಜಿ: ಹಾವೇರಿ.

ಕಛೇರಿಯ ದೂರವಾಣಿ ಸಂಖ್ಯೆ:08378–255271

### ರಚನೆ

ಮುಖ್ಯಸ್ಥರು: ಸಹಾಯಕ ಕಾರ್ಯಪಾಲಕ ಅಭಿಯಂತರರು

ತಾಂತ್ರಿಕ ಶಾಖೆ; ಸಹಾಯಕ ಅಭಿಯಂತರರು/ ಕಿರಿಯ ಅಭಿಯಂತರರು

ಆಡಳಿತ ವಿಷಯದಲ್ಲಿ: ಪ್ರಥಮ ದರ್ಜೆ ಸಹಾಯಕರು ಇವರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವವರು ಹಾಗೂ ಕೆಲಸಗಳ ಸಮನ್ವಯ ಹಾಗೂ ಪೂರಕವಾಗಿ ಬಿ.ಸಿ.ಡಿ. ನೌಕರರು ಸಹ ಕಾರ್ಯನಿರ್ವಹಿಸುತ್ತಿರುವರು.

**4ಬಿ (ii) ಅಧಿಕಾರಿಗಳ ಹಾಗೂ ಸಿಬ್ಬಂದಿ ವರ್ಗದವರ ಕರ್ತವ್ಯಗಳು ಆಡಳಿತ ಶಾಖೆ:**

ಈ ಶಾಖೆ ಕಛೇರಿಯ ಎಲ್ಲಾ ಸಿಬ್ಬಂದಿಯ ಹಾಜರಾತಿ ಶಿಸ್ತು ಪ್ರಕರಣ, ನಡಾವಳಿ ಹಾಗೂ ದೈನಂದಿನ ಪತ್ರಗಳ ರವಾನೆ ಕಾರ್ಯ ಮತ್ತು ಸ್ವೀಕೃತಿ ಕಾರ್ಯ ನಿರ್ವಹಿಸುತ್ತದೆ. ಪ್ರಥಮ ದರ್ಜೆ ಸಹಾಯಕರು ಮುಖ್ಯಸ್ಥರಾಗಿದ್ದು, ವಾರ್ಷಿಕ ರಹಸ್ಯ ವರದಿಗಳು ಆಸ್ತಿ ಮತ್ತು ದಾಯಿತ್ವ ನಿರ್ವಹಣೆ, ಆಡಳಿತ ಶಾಖೆ ಸಿಬ್ಬಂದಿಯ ಉಸ್ತುವಾರಿ, ಆಡಳಿತ ಕಡತಗಳಿಗೆ ಸಂಬಂಧಿಸಿದ ಎಲ್ಲಾ ಪ್ರಸ್ತಾವನೆ ಹಾಗೂ ಪ್ರಕರಣಗಳನ್ನು ಪರಿಶೀಲಿಸುವುದು ಮತ್ತು ತೆಗೆದುಕೊಳ್ಳಬೇಕಾದ ಕ್ರಮವನ್ನು

ಆಳವಡಿಸಿಕೊಂಡು ಸಹಾಯಕ ಕಾರ್ಯಪಾಲಕ ಅಭಿಯಂತರರಿಗೆ ಸಲ್ಲಿಸುವುದು ಇವರಿಗೆ ಪೂರಕವಾಗಿ ವಿಷಯ ನಿರ್ವಾಹಕರು ಕಾರ್ಯನಿರ್ವಹಿಸುತ್ತಿದ್ದಾರೆ.

**ವಿಷಯ: ನಿರ್ವಾಹಕರು:**

**ಪ್ರಥಮ ದರ್ಜೆ ಸಹಾಯಕರು:** ಉಪವಿಭಾಗದ ಎಲ್ಲಾ ಸಿಬ್ಬಂದಿಯ ವಾರ್ಷಿಕ ವೇತನ ಬಡ್ತಿ, ರಜೆ ಮಂಜೂರು ಮಾಡುವ, ವಾರ್ಷಿಕ ಆಯವ್ಯಯ ತಯಾರಿಕೆ, ವಿಧಾನ ಸಭಾ ಹಾಗೂ ವಿಧಾನ ಪರಿಷತ್ತು ಅಧಿವೇಶನದ ಬಗ್ಗೆ, ಎಲ್ಲಾ ಮುಂಗಡದ ನಿರ್ವಹಣೆ, ಮತ್ತು ವರ್ಕ್‌ಕ್ಯಾಷ್ ಬುಕ್ ನಿರ್ವಹಣೆ.

**ದ್ವಿತೀಯ ದರ್ಜೆ ಸಹಾಯಕರು:** ಉಪವಿಭಾಗದ ಎಲ್ಲಾ ಸಿಬ್ಬಂದಿಯ ವೇತನ ಬಿಲ್ಲುಗಳ ತಯಾರಿಕೆ, ಮತ್ತು ಜನರಲ್ ಕ್ಯಾಷ್ ಪುಸ್ತಕ, ಕೋರ್ಟ್ ಕೇಸ್‌ಗಳು, ಖಾಯಂ ಸಿಬ್ಬಂದಿಯ ಸೇವಾ ಪುಸ್ತಕಗಳ ನಿರ್ವಹಣೆ, ಸೂಪರ್‌ನ್ಯೂಮರರಿ ಸಿಬ್ಬಂದಿಯ ಸೇವಾ ಪುಸ್ತಕಗಳ ನಿರ್ವಹಣೆ.

**ದ್ವಿತೀಯ ದರ್ಜೆ ಸಹಾಯಕರು:** ಉಪವಿಭಾಗದ ಎಲ್ಲಾ ಮಾಸಿಕ ವರದಿಗಳನ್ನು ಕಳುಹಿಸುವ ಬಗ್ಗೆ, ಸ್ವೀಕೃತಿ ಮತ್ತು ರವಾನೆ ನಿರ್ವಹಣೆ.

**ದ್ವಿತೀಯ ದರ್ಜೆ ಸಹಾಯಕರು:** ಉಪವಿಭಾಗದ ಉಗ್ರಾಣ ಶಾಖೆಯನ್ನು ನಿರ್ವಹಣೆ ಮಾಡುವುದು.

**ಸೇವಕರು:** ಕಛೇರಿ ಆವರಣವನ್ನು ಶುಭ್ರವಾಗಿಡುವುದು ಹಾಗೂ ಸ್ವಚ್ಛತೆ ಕಾಪಾಡುವುದು. ಕಡತ, ಟಪಾಲು ವಗ್ಯೆರೆಗಳನ್ನು ಶಾಖೆ ಒಳಗೆ ಹಾಗೂ ಹೊರಗೆ ಮತ್ತು ಸಂಬಂಧಪಟ್ಟವರಿಗೆ ತಲುಪಿಸುವುದು. ಇತ್ಯಾದಿ ಕೆಲಸಗಳನ್ನು ನಿರ್ವಹಿಸುವುದು.

**ತಾಂತ್ರಿಕ ಶಾಖೆ:** ಈ ಶಾಖೆ ಕಛೇರಿಯ ರಸ್ತೆಗಳ ಮತ್ತು ಕಟ್ಟಡಗಳ ಕಾಮಗಾರಿಗಳ ನಿರ್ಮಾಣ, ದುರಸ್ತಿ ನಿರ್ವಹಣೆ ಕಾಮಗಾರಿಗಳ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳನ್ನು ನಿರ್ವಹಿಸುತ್ತಿರುತ್ತಾರೆ.

**4ಬಿ (iii) ಕಾರ್ಯವಿಧಾನ:**

**ವಿಷಯ ನಿರ್ವಾಹಕರು:** ಪ್ರಸ್ತಾವನೆ ಸ್ವೀಕರಿಸಿದ ನಂತರ ಹೊಸ ಕಡತ ತೆರೆಯುವುದು, ಚಾಲ್ತಿಯಲ್ಲಿರುವ ಕಡತಗಳಿಗೆ ಸ್ವೀಕೃತಿಗಳನ್ನು ನಿಯಮಾನುಸಾರ ಪರಿಶೀಲಿಸಿ ಮಂಡಿಸುವುದು.

**ಶಾಖಾ ಮುಖ್ಯಸ್ಥರು:** ಸಂಬಂಧಿಸಿದ ಪ್ರಸ್ತಾವನೆಯನ್ನು ಪರಿಶೀಲಿಸುವುದು ಮತ್ತು ತೆಗೆದುಕೊಳ್ಳಬೇಕಾದ ಕ್ರಮವನ್ನು ಅಳವಡಿಸಿಕೊಂಡು ಸಹಾಯಕ ಕಾರ್ಯಪಾಲಕ ಅಭಿಯಂತರರಿಗೆ ಸಲ್ಲಿಸುವುದು.

**ಸಹಾಯಕ ಕಾರ್ಯಪಾಲಕ ಅಭಿಯಂತರರು:** ಪ್ರಸ್ತಾವನೆ ಅಥವಾ ಪ್ರಕರಣಗಳ ಮೇಲೆ ತೆಗೆದುಕೊಳ್ಳಬೇಕಾದ ಕ್ರಮವನ್ನು ನಿರ್ಧರಿಸಿ ನಿರ್ಣಯ ತೆಗೆದುಕೊಳ್ಳುವುದು ಹಾಗೂ ಅವಶ್ಯವಿದ್ದಲ್ಲಿ ಮೇಲಾಧಿಕಾರಿಗಳ ಅನುಮೋದನೆಗೆ ಸಲ್ಲಿಸುವುದು.

**4ಬಿ (iv) ಕಾರ್ಯ ನಿರ್ವಹಿಸುವಲ್ಲಿ ಅನುಸರಿಸುವ ಮಾನ ದಂಡಗಳು:**

ಈ ಕಛೇರಿಯು ವಿಭಾಗ ಕಛೇರಿಯಿಂದ ಅನುಮೋದನೆಗೊಂಡ ಟೆಂಡರ್‌ಗಳಿಗೆ, ಕೆಲಸವನ್ನು ನಿರ್ವಹಿಸುವಂತೆ ಗುತ್ತಿಗೆದಾರರಿಗೆ ಸೂಚನೆಗಳನ್ನು ನೀಡುತ್ತಾರೆ. ಸಹಾಯಕ ಕಾರ್ಯಪಾಲಕ ಅಭಿಯಂತರರು, ಗುತ್ತಿಗೆದಾರರಿಗೆ ಕಾಮಗಾರಿಯನ್ನು ಹಸ್ತಾಂತರಿಸಿ ಅಂಗೀಕರಿಸಿದ ಟೆಂಡರ್ ದರಗಳ ಪ್ರಕಾರ ಕೆಲಸವನ್ನು ಅನುಷ್ಠಾನಗೊಳಿಸಲು ಸಂಬಂಧಿಸಿದ ಸಹಾಯಕ/ ಕಿರಿಯ ಅಭಿಯಂತರರಿಗೆ ನಿರ್ದೇಶನವನ್ನು ನೀಡಲಾಗುತ್ತದೆ. ಹಾಗೂ ದೈನಂದಿನ ಕೆಲಸದ ಉಸ್ತುವಾರಿಯನ್ನು ಸಹ ನೋಡಿಕೊಳ್ಳುತ್ತಾರೆ. ಹಾಗೆಯೇ ಸಹಾಯಕ ಕಾರ್ಯಪಾಲಕ ಅಭಿಯಂತರವರು ಕೆಲಸದ ಸ್ಥಳಕ್ಕೆ ಭೇಟಿ ನೀಡಿ ಸಲಹೆ ಸೂಚನೆ ನೀಡಿ ಕಾರ್ಯದಕ್ಷತೆ ಗುಣಮಟ್ಟವನ್ನು ಪರಿವೀಕ್ಷಿಸುತ್ತಾರೆ. ಪ್ರತಿ ತಿಂಗಳು ಎಲ್ಲಾ ಇಂಜಿನಿಯರ್‌ಗಳನ್ನು ಹಾಗೂ ಸಿಬ್ಬಂದಿ ವರ್ಗದವರುಗಳ ಸಭೆ ಕರೆದು ಚರ್ಚಿಸಿ ಪ್ರತಿ ನಿತ್ಯ ನಡೆಯುವ ಕೆಲಸ ಕಾರ್ಯಗಳ ಪ್ರಗತಿಯ ಬಗ್ಗೆ ಮಾಹಿತಿಯನ್ನು ಪರಿಶೀಲಿಸುತ್ತಾರೆ. ಹಾಗೂ ಸಾಧಿಸಬೇಕಾಗಿರುವ ತುರ್ತು ಕಾಮಗಾರಿಗಳ ಕೆಲಸಗಳಿಗೆ ಚರ್ಚಿಸಿ ಸೂಕ್ತ ಮಾಹಿತಿಯನ್ನು ಕಾರ್ಯಪಾಲಕ ಅಭಿಯಂತರರವರಿಗೆ ಸಲ್ಲಿಸಲಾಗುತ್ತದೆ. ಹಾಗೂ ಪ್ರಗತಿಯನ್ನು ಪರಿಶೀಲಿಸಲು ವಿಭಾಗ ಕಛೇರಿಯಲ್ಲಿ ಕಾರ್ಯಪಾಲಕ ಅಭಿಯಂತರವರು ಪ್ರತಿ ತಿಂಗಳು ಎಂ.ಎಂ.ಆರ್. ಮೀಟಿಂಗ್ ಸಹ ನಡೆಸುವರು.

**4ಬಿ (v) ಕಾರ್ಯ ನಿರ್ವಹಿಸುವಲ್ಲಿ ಸಿಬ್ಬಂದಿ ಉಪಯೋಗಿಸುವ ನಿಯಮ ನಿಬಂಧನೆಗಳು**

**ಸೂಚನೆಗಳು:**

1) ಕರ್ನಾಟಕ ನಾಗರೀಕ ಸೇವಾ ನಿಯಮಗಳು–1958

2) ಕರ್ನಾಟಕ ನಾಗರೀಕ ಸೇವೆಗಳು–1957, 66 ಮತ್ತು 1977

3) ಬಜೆಟ್ ಮ್ಯಾನುಯಲ್

4) ಕರ್ನಾಟಕ ಆರ್ಥಿಕ ಸಂಹಿತೆ

5) ಲೋಕೋಪಯೋಗಿ ಇಲಾಖೆ ಸಂಹಿತೆ 1 ಮತ್ತು 2

6) ಶೆಡ್ಯೂಲ್ ಆಫ್ ರೇಟ್ಸ್

7) ಆಗಿಂದಾಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹಾಗೂ ಆರ್ಥಿಕ ಇಲಾಖೆ, ಲೋಕೋಪಯೋಗಿ ಇಲಾಖೆ ಇವರಿಂದ ಹೊರಡಿಸುವ ಆದೇಶ ಇತ್ಯಾದಿ.

8) ಹ್ಯಾಂಡ್ ಬುಕ್ ಆಫ್ ಆಫೀಸ್ ಪ್ರೊಸೀಜರ್.

9) ಮ್ಯಾನುಯಲ್ ಆಫ್ ಕಾಂಟಿಂಜೆಂಟ್ ಎಕ್ಸ್‌ಪೆಂಡಿಚರ್–1958.

10) ಕರ್ನಾಟಕ ಖಜಾನೆ ಸಂಹಿತೆ

11) ಕರ್ನಾಟಕ ಪಬ್ಲಿಕ್ ವರ್ಕ್ಸ್ ಅಕೌಂಟ್ಸ್ ಕೋಡ್ ವಾಲ್ಯೂಮ್ 1 ಮತ್ತು 2

12) ಕರ್ನಾಟಕ ಸ್ಟೋರ್ಸ್ ಮ್ಯಾನುಯಲ್

**4ಬಿ (vi) ಕಛೇರಿ ಹೊಂದಿರುವ ದಾಸ್ತಾವೇಜುಗಳ ಪಟ್ಟಿ:**

1) ಎಲ್ಲಾ ಶಾಖಾ ರಕ್ಷ ಕಡತಗಳು [ಬಿ(iii) ರಲ್ಲಿ ಸೂಚಿಸಿರುವಂತೆ ವಿಷಯ ನಿರ್ವಾಹಕರು ನಿರ್ವಹಿಸುವ ವಿಷಯಗಳ ಕಡತಗಳು]

2) ಶಾಖಾ ದಿನವಹಿ.

3) ರವಾನೆ, ಸ್ವೀಕೃತಿ ವಹಿ ಹಾಗೂ ಮಾಹಿತಿ ಹಕ್ಕು ಕುರಿತಾದ ಸ್ವೀಕೃತಿ ಪತ್ರಗಳ ವಹಿ.

4) ವಿಧಾನ ಸಭೆ, ಪರಿಷತ್ ಪ್ರಶ್ನೆಗಳಿಗೆ ಸಂಬಂಧಿಸಿದ ವಹಿಗಳು.

5) ಸರ್ಕಾರದ ಹಾಗೂ ರಹಸ್ಯವರದಿಗಳಿಗೆ ಸಂಬಂಧಿಸಿದ ವಹಿಗಳು.

6) ಸೇವಾ ಪುಸ್ತಕಗಳು.

7) ವಾರ್ಷಿಕ ಕಾರ್ಯನಿರ್ವಹಣಾ ವಹಿ.

**4ಬಿ (vii) ನೀತಿ ನಿಯಮಗಳನ್ನು ರೂಪಿಸಲು ಸಾರ್ವಜನಿಕರೊಂದಿಗೆ ಸಮಾಲೋಚಿಸಲು ಅಸ್ತಿತ್ವದಲ್ಲಿರುವ ಕಾರ್ಯವಿಧಾನದ ವಿವರಗಳು:**

ಕಾರ್ಯ ನೀತಿಗಳನ್ನು ರೂಪಿಸುವ ಬಗ್ಗೆ ಹಾಗೂ ಕಾರ್ಯರೂಪಕ್ಕೆ ತರುವ ಬಗ್ಗೆ ಸಲಹೆ, ಸೂಚನೆಗಳನ್ನು ಇಲಾಖಾ ಮುಖ್ಯಸ್ಥರಿಗೆ ಅವಗಾಹನೆಗೆ ಆಗಿಂದಾಗ್ಗೆ ತರಲಾಗುತ್ತದೆ.

**4ಬಿ (viii) ಮಂಡಳಿ ಸಮಿತಿಗಳು:**

ಉಪವಿಭಾಗ ಮಟ್ಟದಲ್ಲಿ ಸಮಿತಿಗಳಿರುವುದಿಲ್ಲ.

| **4ಬಿ (ix) ಈ ಕಛೇರಿಯ ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದ ನಿರ್ದೇಶಿಕೆ ಕ್ರ.ಸಂ.** | **ಹೆಸರು ಮತ್ತು ಪದನಾಮ** | **ಕಾರ್ಯನಿರ್ವಹಿಸುತ್ತಿರುವ ಕಛೇರಿಯ ಹೆಸರು** | **ದೂರವಾಣಿ ಸಂಖ್ಯೆ** | **ಷರಾ** |
|---|---|---|---|---|
| 1. | ಶ್ರೀಯುತ ಆರ್.ಸಿ. ಮೇಸ್ತ್ರಿ ಸಕಾನಿಇಂ | ಸಹಾಯಕ ಕಾರ್ಯಪಾಲಕ ಅಭಿಯಂತರರು, ಉಪವಿಭಾಗ, ಶಿಗ್ಗಾಂವ | 255271 | – |
| 2. | ಶ್ರೀ ಎಂ.ಎಂ. ಕೊಟಗಿಮನಿ, ಸ.ಅ. | –"– | 255271 | – |
| 3. | ಶ್ರೀ ಆರ್.ಪಿ. ಸಕ್ಕರಿ ಸ.ಇಂ. | –"– | 255271 | – |
| 4. | ಶ್ರೀ ಎಸ್.ಎಸ್. ಮುದ್ದಿ ಕಿ.ಅ. | –"– | 255271 | – |
| 5. | ಶ್ರೀ ವಿ.ಎಸ್. ಕುರಟ್ಟಿ ಕಿ.ಅ. | –"– | 255271 | – |

| 4ಬಿ (ix) ಈ ಕಛೇರಿಯ ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದ ನಿರ್ದೇಶಿಕೆ ಕ್ರ.ಸಂ. | ಹೆಸರು ಮತ್ತು ಪದನಾಮ | ಕಾರ್ಯನಿರ್ವಹಿಸುತ್ತಿರುವ ಕಛೇರಿಯ ಹೆಸರು | ದೂರವಾಣಿ ಸಂಖ್ಯೆ | ಷರಾ |
|---|---|---|---|---|
| 6. | ಶ್ರೀ ಎಂ.ಎಸ್. ಬಸಾಪೂರ ಪ್ರ.ದ.ಸ. | –"– | 255271 | – |
| 7. | ಶ್ರೀ ಎಂ.ಎನ್. ಕುಲಕರ್ಣಿ, ದ್ವಿ.ದ.ಸ. | –"– | 255271 | – |
| 8. | ಶ್ರೀ ಇರ್ಷಾದಖಾನ್, ದ್ವಿ.ದ.ಸ. | –"– | 255271 | – |
| 9. | ಶ್ರೀ ಎಂ.ಬಿ. ರೋಟ್ಟಿ ದ್ವಿ.ದ.ಸ. | –"– | 255271 | – |

| 4ಬಿ (x) ನಿಯಮಾನುಸಾರ ಉಪವಿಭಾಗ ಕಛೇರಿಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ಪಡೆಯುತ್ತಿರುವ ಮೂಲ ವೇತನ ವಿವರ. ಕ್ರ.ಸಂ. | ಹೆಸರು ಮತ್ತು ಪದನಾಮ | ವೇತನ ಶ್ರೇಣಿ | ಮೂಲ ವೇತನ |
|---|---|---|---|
| 1. | ಶ್ರೀಯುತ ಆರ್.ಸಿ. ಮೇಸ್ತ್ರಿ ಸಕಾನಿಇಂ | 14050–25050 | 25050.00+1200.00 |
| 2. | ಶ್ರೀ ಎಂ.ಎಂ. ಕೊಟಗಿಮನಿ, ಸ.ಅ. | 11400–21600 | 12650.00 |
| 3. | ಶ್ರೀ ಆರ್.ಪಿ. ಸಕ್ಕರಿ ಸ.ಇಂ. | 11400–21600 | 16650.00 |
| 4. | ಶ್ರೀ ಎಸ್.ಎಸ್. ಮುದ್ದಿ ಕಿ.ಅ. | 10000–18150 | 12300.00 |
| 5. | ಶ್ರೀ ವಿ.ಎಸ್. ಕುರಟ್ಟಿ ಕಿ.ಅ. | 8825–16000 | 11700.00 |
| 6. | ಶ್ರೀ ಎಂ.ಎಸ್. ಬಸಾಪೂರ ಪ್ರ.ದ.ಸ. | 8000–14800 | 10250.00 |
| 7. | ಶ್ರೀ ಎಂ.ಎನ್. ಕುಲಕರ್ಣಿ, ದ್ವಿ.ದ.ಸ. | 7275–13350 | 10500.00 |
| 8. | ಶ್ರೀ ಇರ್ಷಾದಖಾನ್, ದ್ವಿ.ದ.ಸ. | 5800–10500 | 6000.00 |
| 9. | ಶ್ರೀ ಎಂ.ಬಿ. ರೋಟ್ಟಿ ದ್ವಿ.ದ.ಸ. | 5800–10500 | 8600.00 |

**(XI) 2009–10ನೇ ಸಾಲಿನ ಆಯವ್ಯಯದಲ್ಲಿ ಲೋಕೋಪಯೋಗಿ ಇಲಾಖೆಗೆ ವಿವಿಧ ಯೋಜನಾವಾರು ವಿವಿಧ ಲೆಕ್ಕ ಶೀರ್ಷಿಕೆಯಲ್ಲಿ ನಿಗದಿಪಡಿಸಲಾದ ಅನುದಾನದ ವಿವರಗಳು:**

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಅನುದಾನ ಲಕ್ಷಗಳಲ್ಲಿ ರೂ. |
|---|---|---|
| 1. | 5054 ಸಿಆರ್ಎಫ್ ಯೋಜನೆ | 60.00 |
| 2. | 5054 ಇತರೆ ರಸ್ತೆ ಯೋಜನೆ | 135.00 |
| 3. | 5054 ನಬಾರ್ಡ್ | 83.00 |

**4ಬಿ (xii) ಸಹಾಯಧನ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ವಿಧಾನ ಅದಕ್ಕಾಗಿ ನಿಗದಿಗೊಳಿಸಲಾದ ಮೊತ್ತ ಮತ್ತು ಫಲಾನುಭವಿಗಳ ವಿವರ:**

–ಯಾವುದೂ ಇರುವುದಿಲ್ಲ–

**4ಬಿ (xiii) ರಿಯಾಯಿತಿಗಳನ್ನು ಪಡೆದವರ/ ಅಧಿಕಾರಿ ಪತ್ರಗಳನ್ನು ಮಂಜೂರು ಮಾಡಿದ ಬಗ್ಗೆ ವಿವರಗಳು:**

–ಯಾವುದೂ ಇರುವುದಿಲ್ಲ–

**4ಬಿ (xiv) ವಿದ್ಯುನ್ಮಾನ ವ್ಯವಸ್ಥೆಯಲ್ಲಿ ಲಭ್ಯವಿರುವ ಮಾಹಿತಿಗಳ ವಿವರ:**

–ಯಾವುದೂ ಇರುವುದಿಲ್ಲ–

**4ಬಿ (xv) ಸಾರ್ವಜನಿಕ ಉಪಯೋಗಕ್ಕಾಗಿ ಪುಸ್ತಕ ಭಂಡಾರ ಅಥವಾ ವಾಚನಾಲಯವನ್ನು ನಿರ್ವಹಿಸುತ್ತಿದ್ದಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಅಲ್ಲಿ ದೊರೆಯುವ ಸೌಲಭ್ಯಗಳು ಮತ್ತು ಕೆಲಸದ ಅವಧಿಯ ವಿವರಗಳು:**

–ಯಾವುದೂ ಇರುವುದಿಲ್ಲ–

4 (16)ಬಿ. ಸಾರ್ವಜನಿಕ ಮಾಹಿತಿ ಅಧಿಕಾರಿಗಳ ವಿವರಣೆ.

ಸಚಿವಾಲಯ ಇಲಾಖೆ: ಲೋಕೋಪಯೋಗಿ ಇಲಾಖೆ

ಉಪಘಟಕ: ಸಹಾಯಕ ಕಾರ್ಯಪಾಲಕ ಅಭಿಯಂತರರು ಉಪ–ವಿಭಾಗ ಶಿಗ್ಗಾಂವ.

ಸಾರ್ವಜನಿಕ ಪ್ರಾಧಿಕಾರ: ಮುಖ್ಯ ಅಭಿಯಂತರರು ಸಂಪರ್ಕ ಮತ್ತು ಕಟ್ಟಡಗಳು (ಉ) ಧಾರವಾಡ.

| **ಮೇಲ್ಮನವಿ ಅಧಿಕಾರಿ ಹೆಸರು ಮತ್ತು ವಿಳಾಸ ದೂರವಾಣಿ ಇತ್ಯಾದಿ** | **ಸಾರ್ವಜನಿಕ ಮಾಹಿತಿ ಅಧಿಕಾರಿ** | **ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ** |
|---|---|---|
| ಸಹಾಯಕ ಕಾರ್ಯಪಾಲಕ ಅಭಿಯಂತರರು<br>ಶ್ರೀ ಆರ್.ಸಿ. ಮೇಸ್ತ್ರಿ<br>ಉಪ–ವಿಭಾಗ ಶಿಗ್ಗಾಂವ,<br>ದೂ.ಸಂ.255271<br>ಫ್ಯಾಕ್ಸ್–255271<br>ಈ–ಮೇಲ್:aeesgn@kpwd.gov.in | ಸಹಾಯಕ ಅಭಿಯಂತರರು<br>ಶ್ರೀ ಎಂ.ಎಂ. ಕೊಟಗಿಮನಿ<br>ಉಪ–ವಿಭಾಗ ಶಿಗ್ಗಾಂವ,<br>ದೂ.ಸಂ.255271<br>ಫ್ಯಾಕ್ಸ್–255271<br>ಈ–ಮೇಲ್ | ಕಿರಿಯ ಅಭಿಯಂತರರು (ವಿ.ದ.)<br>ಶ್ರೀ ಆರ್.ಪಿ. ಸಕ್ಕರಿ, ಸ.ಇಂ.<br>ಉಪ–ವಿಭಾಗ ಶಿಗ್ಗಾಂವ,<br>ದೂ.ಸಂ.255271<br>ಫ್ಯಾಕ್ಸ್–255271<br>ಈ–ಮೇಲ್ |

**4ಬಿ (xvii) ನಿಗದಿಗೊಳಿಸಲಾಗುವ ಇತರೆ ಮಾಹಿತಿಗಳು**

–ಯಾವುದೂ ಇರುವುದಿಲ್ಲ–

ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರರು,
ಲೋಕೋಪಯೋಗಿ ಬಂದರು ಮತ್ತು ಒಳನಾಡು,
ಜಲಸಾರಿಗೆ ಇಲಾಖೆ, ಉಪ–ವಿಭಾಗ,
ಶಿಗ್ಗಾಂವ ಜಿ: ಹಾವೇರಿ.

ಪಿ.ಆರ್.214

## ಪಂಚಾಯತ್‌ರಾಜ್ ಇಂಜನೀಯರಿಂಗ್ ಇಲಾಖೆ

## ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರ ಕಛೇರಿ, ಪಂಚಾಯತ್‌ರಾಜ್ ಇಂಜನೀಯರಿಂಗ್ ಇಲಾಖೆ, ರಾಣೆಬೆನ್ನೂರು, ಉಪ–ವಿಭಾಗ, ರಾಣೇಬೆನ್ನೂರು

**ಅಧಿಸೂಚನೆ ಸಂಖ್ಯೆ: ಸಕಾನಿಇಂ/ಪಂರಾಇ/ಮಾಹಅ/2007–08, ದಿನಾಂಕ:30ನೇ ಜನವರಿ, 2008**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22) ರ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್‌ರಾಜ್ ಇಂಜನೀಯರಿಂಗ್ ಉಪ–ವಿಭಾಗ, ರಾಣೇಬೆನ್ನೂರು ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್–5(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಮತ್ತು ಸೆಕ್ಷನ್–5(2) ರಡಿಯಲ್ಲಿ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಹಾಗೂ ಸೆಕ್ಷನ್–19(1) ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಅ. ನಂ. | ಕಛೇರಿ ಮತ್ತು ಪೂರ್ಣ ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1. | ಸಹಾಯಕ ಕಾರ್ಯ ನಿರ್ವಾಹಕ ಇಂಜಿನೀಯರ್, ಪಂಚಾಯತ್‌ರಾಜ್ ಇಂಜಿನೀಯರಿಂಗ್ ಉಪ–ವಿಭಾಗ, ರಾಣೇಬೆನ್ನೂರು | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್‌ರಾಜ್ ಇಂಜಿನೀಯರಿಂಗ್ ಉಪ–ವಿಭಾಗ, ರಾಣೇಬೆನ್ನೂರು | ಸಹಾಯಕ ಇಂಜಿನೀಯರವರ (ಸೇವೆಯಲ್ಲಿ ಹಿರಿಯರು) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್‌ರಾಜ್ ಇಂಜಿನೀಯರಿಂಗ್ ಉಪ–ವಿಭಾಗ, ರಾಣೇಬೆನ್ನೂರು | ಕಾರ್ಯನಿರ್ವಾಹಕ ಇಂಜಿನೀಯರ, ಪಂಚಾಯತ್‌ರಾಜ್ ಇಂಜಿನೀಯರಿಂಗ್ ವಿಭಾಗ, ಹಾವೇರಿ. |

**ವಿ.ಕೆ. ಟಿಕಾರೆ,**
ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್,
ಪಂಚಾಯತ್‌ರಾಜ್ ಇಂಜಿನೀಯರಿಂಗ್
ಉಪ–ವಿಭಾಗ, ರಾಣೇಬೆನ್ನೂರು.

**ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ)**

**ಕರ್ನಾಟಕ ಸರ್ಕಾರ**

**ಪಂಚಾಯತ್‌ರಾಜ್ ಇಂಜಿನೀಯರಿಂಗ್ ಉಪ–ವಿಭಾಗ, ರಾಣೇಬೆನ್ನೂರು**

**ಕೈಪಿಡಿ–1**

**ಸಂಸ್ಥೆಯ ವಿವರಗಳು ಮತ್ತು ಕರ್ತವ್ಯಗಳು ಮತ್ತು ವಿಧಿಗಳು:**

ಕರ್ನಾಟಕ ರಾಜ್ಯದಲ್ಲಿನ ಹಾವೇರಿ ಜಿಲ್ಲೆಯ ರಾಣೇಬೆನ್ನೂರು ತಾಲ್ಲೂಕಿನ ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ ವ್ಯಾಪ್ತಿಯ ರಸ್ತೆಗಳ ನಿರ್ಮಾಣ ನಿರ್ವಹಣೆ ಮತ್ತು ದುರಸ್ತಿ ಕಾರ್ಯಗಳನ್ನು ಮತ್ತು ಪಂಚಾಯತ್‌ರಾಜ್ ಇಂಜಿನೀಯರಿಂಗ್ ಇಲಾಖೆಯ ವಸತಿ ಗೃಹಗಳು, ಸರ್ಕಾರಿ ಕಛೇರಿ ಕಟ್ಟಡಗಳ ನಿರ್ಮಾಣ ಹಾಗೂ ನಿರ್ವಹಣೆ ಕೆಲಸಗಳನ್ನು ಹಾಗೂ ಕುಡಿಯುವ ನೀರಿನ ವ್ಯವಸ್ಥೆಯನ್ನು ಸುಗಮವಾಗಿ ಹಾಗೂ ಸುವ್ಯವಸ್ಥಿತವಾಗಿ ನಿರ್ವಹಿಸುವ ದೃಷ್ಟಿಯಿಂದ––– ಕಾರ್ಯನಿರ್ವಾಹಕ ಇಂಜಿನೀಯರರು, ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ, ಹಾವೇರಿ ಅಧೀಕ್ಷಕ ಇಂಜಿನೀಯರ್, ಪಂಚಾಯತ್‌ರಾಜ್ ಇಂಜಿನೀಯರಿಂಗ್ ಇಲಾಖೆ, ಧಾರವಾಡ ವೃತ್ತ, ಧಾರವಾಡ ಹಾಗೂ ಮುಖ್ಯ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ, ಬೆಂಗಳೂರು ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿದೆ. ಈ ಉಪ–ವಿಭಾಗದಡಿಯಲ್ಲಿ 2006–07ರ ಪ್ರಕಾರ ರಸ್ತೆ, ಸೇತುವೆ ಮತ್ತು ಕಟ್ಟಡಗಳ ವಿವರ ಹಾಗೂ ಕುಡಿಯುವ ನೀರಿನ ಮಾಹಿತಿಯು ಈ ಕೆಳಗಿನಂತಿರುತ್ತದೆ.

**ಅ) ರಸ್ತೆಗಳು**

| | | |
|---|---|---|
| 1) ಗ್ರಾಮೀಣ ರಸ್ತೆಗಳು | ಕಿಮೀ | 745.00 |

**ಬ) ಸೇತುವೆಗಳು**

| | | |
|---|---|---|
| 1) ಸಣ್ಣ ಸೇತುವೆಗಳು | ನಂ. | 2 |
| 2) ಅಡ್ಡ ಮೋರಿಗಳು | ನಂ. | 169 |

**ಕ) ಕಟ್ಟಡಗಳು**

| | | |
|---|---|---|
| 1) ಮುಖ್ಯ ಕಟ್ಟಡಗಳು | ನಂ. | 13 |
| 2) ಸಣ್ಣ ಕಟ್ಟಡಗಳು | ನಂ. | 474 |

**ಡ) ಕುಡಿಯುವ ನೀರು**

| | | |
|---|---|---|
| 1) ನೀರು ಸರಬರಾಜು ಯೋಜನೆಗಳು | ನಂ. | 109 |
| 2) ಕಿರು ನೀರು ಸರಬರಾಜು ಯೋಜನೆ | ನಂ. | 135 |
| 3) ಕೈಪಂಪು ಕೊಳವೆ ಬಾವಿಗಳು | ನಂ. | 435 |

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಇವರು ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ–ವಿಭಾಗ, ರಾಣೇಬೆನ್ನೂರು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ 4 ಶಾಖೆಗಳು ಕಾರ್ಯನಿರ್ವಹಿಸುತ್ತವೆ.

1. ತಾಂತ್ರಿಕ ಶಾಖೆ
2. ಆಡಳಿತ ಶಾಖೆ
3. ಲೆಕ್ಕಶಾಖೆ
4. ಉಗ್ರಾಣ ಶಾಖೆ

**1. ತಾಂತ್ರಿಕ ಶಾಖೆ:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರು ಈ ಉಪ–ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು, ಇವರಿಗೆ ಸಹಾಯಕ್ಕಾಗಿ ಸಹಾಯಕ ಇಂಜಿನೀಯರರು–02, ಕಿರಿಯ ಇಂಜಿನೀಯರರು–05, ಅದರಲ್ಲಿ ಒಂದು ಕಿರಿಯ ಇಂಜಿನೀಯರರ ಹುದ್ದೆ ಖಾಲಿ ಇರುತ್ತದೆ. ಕೆಲಸ ನಿರೀಕ್ಷಕರು–04 ಕಾರ್ಯನಿರ್ವಹಿಸುತ್ತಾರೆ.

1) ಉದ್ದೇಶಿಸಿರುವ ರಸ್ತೆ, ಸೇತುವೆ ಮತ್ತು ಕಟ್ಟಡ ಕಾಮಗಾರಿಗಳ ನಿರ್ಮಾಣ ಹಾಗೂ ನಿರ್ವಹಣೆ ಹಾಗೂ ಪರಿವೀಕ್ಷಣೆ ಹಾಗೂ ತಾಂತ್ರಿಕವಾಗಿ ಪರಿಶೀಲಿಸುವುದು.

2) ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ತಯಾರಿಸಿ ಆಡಳಿತಾತ್ಮಕ ಅನುಮೋದನೆಗಾಗಿ ಹಾಗೂ ತಾಂತ್ರಿಕ ಮಂಜೂರಾತಿಗಾಗಿ ವಿಭಾಗ ಕಛೇರಿಗೆ ಸಲ್ಲಿಸುವುದು.

3) ಯೋಜನೆಗಳ ಅನುಷ್ಠಾನದ ಪ್ರಗತಿ ಪತ್ರಿಕೆಗಳನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವುದು.

4) ಎಂಎಂಆರ್ ಮತ್ತು ಕೆ.ಡಿ.ಪಿ. ಸಭೆಗಳಿಗೆ ಪ್ರಗತಿ ವರದಿ ತಯಾರಿಸುವುದು ಮತ್ತು ಹಾಜರಾಗುವುದು.

5) ಕಾಮಗಾರಿಗಳ ಕಾರ್ಯಕ್ರಮ ಪಟ್ಟಿ ತಯಾರಿಸುವುದು ಹಾಗೂ ಅನುಮೋದನೆ ಪಡೆಯುವುದು.

6) ತಾಲ್ಲೂಕು ಮಟ್ಟದ ಕೆ.ಡಿ.ಪಿ. ಸಭೆಗೆ ಪ್ರಗತಿ ವರದಿ ತಯಾರಿಸುವುದು ಹಾಗೂ ಹಾಜರಾಗುವುದು.

7) ಯೋಜನೆಗಳ ನಿರ್ಮಾಣದ ಪಾವತಿಗಳನ್ನು ನಮೂದಿಸಿ ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವುದು.

**2. ಆಡಳಿತ ಶಾಖೆ:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್‌ರಾಜ್ ಇಂಜಿನೀಯರಿಂಗ್ ಉಪ–ವಿಭಾಗ, ರಾಣೇಬೆನ್ನೂರು ಕಛೇರಿಯಲ್ಲಿ ಮಂಜೂರಾದ ಹುದ್ದೆಗಳು ಒಟ್ಟು 33 ಹಾಗೂ ಹೆಚ್ಚುವರಿ ಸೂಪರ್ ನ್ಯೂಮರಿ ಹುದ್ದೆಗಳು 5, ಒಟ್ಟು 38 ಹುದ್ದೆಗಳು ಇದ್ದು, ಇವುಗಳಲ್ಲಿ ಮಂಜೂರಾದ ಹುದ್ದೆಗಳಲ್ಲಿ 24 ಹಾಗೂ ಹೆಚ್ಚುವರಿ ಹುದ್ದೆಗಳು 5 ಒಟ್ಟು 29 ಜನ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ ಎ–1 ವರ್ಗ ಬಿ–3, ವರ್ಗ ಸಿ–11 ಮತ್ತು ವರ್ಗ ಡಿ–6 ಮಂಜೂರಾದ ಹುದ್ದೆಗಳಲ್ಲಿದ್ದರೆ. ಹೆಚ್ಚುವರಿ ಹಾಗೂ ಸೂಪರ್ ನ್ಯೂಮರಿ ಹುದ್ದೆಯಲ್ಲಿ ಸಿ–2 ಮತ್ತು ಗ್ರೂಪ್ ಡಿ–3 ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

ಆಡಳಿತ ಶಾಖೆಯಲ್ಲಿ ಇಬ್ಬರು ದ್ವಿತೀಯ ದರ್ಜೆ ಸಹಾಯಕರು ಕಾರ್ಯನಿರ್ವಹಿಸುತ್ತಿದ್ದು, ಇವರಲ್ಲಿ ಒಬ್ಬರು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು, ಸಿಬ್ಬಂದಿ ವೇತನ ಬಿಲ್ಲು, ವಿದ್ಯುಚ್ಛಕ್ತಿ ಮತ್ತು ದೂರವಾಣಿ ಬಿಲ್ಲು ಹಾಗೂ ಸದರಿ ನೌಕರರ ರಜೆ ಇತ್ಯಾದಿಗಳ ನಿರ್ವಹಣೆ ಮತ್ತು ಸಿಬ್ಬಂದಿಗೆ ಸಂಬಂಧಪಟ್ಟ ನಿಯತಕಾಲಿಕಗಳನ್ನು ಸಲ್ಲಿಸುವ ಕಾರ್ಯಗಳನ್ನು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರ ಆದೇಶಗಳ ಮೇರೆಗೆ ಕಾರ್ಯನಿರ್ವಹಿಸುತ್ತಾರೆ. ಈ ಆಡಳಿತ ಶಾಖೆಯಲ್ಲಿ ನಿರ್ವಹಿಸುವ ಸಂಕ್ಷಿಪ್ತ ಕೆಲಸಗಳ ವಿವರಗಳನ್ನು ಈ ಕೆಳಕಂಡಂತೆ ನೀಡಲಾಗಿದೆ.

1) ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳ ಹಾಗೂ ಬಡ್ತಿಗಳ ಮತ್ತು ನಿವೃತ್ತಿ, ಪಿಂಚಣಿ, ರಜೆ ವಗ್ಯೆರೆಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಸಲ್ಲಿಸುವುದು ಮತ್ತು ನಿರ್ವಹಿಸುವುದು.

2) ಸಿಬ್ಬಂದಿ ವರ್ಗದ ವೇತನ ಬಿಲ್ಲುಗಳನ್ನು ಹಾಗೂ ಸಾದಿಲ್ವಾರು ಬಿಲ್ಲುಗಳನ್ನು ಸಿದ್ಧಪಡಿಸುವುದು ಮತ್ತು ಸಂಬಂಧಪಟ್ಟಂತೆ ಅನುದಾನ ವಗ್ಯೆರೆಗಳನ್ನು ಬಿಲ್ಲುಗಳಿಗೆ ಸಕ್ಷಮ ಅಧಿಕಾರಿಯ ಅನುಮೋದನೆ ಪಡೆದ ನಂತರವೇ ನಗದೀಕರಣಕ್ಕೆ ಸಲ್ಲಿಸುವುದು.

3) ನೌಕರರ ವಾರ್ಷಿಕ ವರದಿಗಳಾದ ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ ಹಾಗೂ ಕಾರ್ಯನಿರ್ವಹಣಾ ವರದಿಗಳನ್ನು ನೌಕರರಿಂದ ಪಡೆದು ಮೇಲಾಧಿಕಾರಿಗಳ ಅವಗಾಹನೆಗೆ ಸಲ್ಲಿಸುವುದು.

4) ಆಡಳಿತಕ್ಕೆ ಸಂಬಂಧಿಸಿದಂತೆ ಉಪ–ವಿಭಾಗದ ಆಯವ್ಯಯ ಅಂದಾಜು ಪಟ್ಟಿಯ ವಿವರಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಲು ಸಿದ್ಧಪಡಿಸುವುದು.

5) ಆಡಳಿತ ಶಾಖೆಯ ಇನ್ನೊಬ್ಬ ದ್ವಿತೀಯ ದರ್ಜೆ ಸಹಾಯಕರು ಕಛೇರಿಗೆ ಬರುವ ಮತ್ತು ಕಛೇರಿಯಿಂದ ಹೋಗುವ ಪತ್ರಗಳ ಸ್ವೀಕೃತಿ ಮತ್ತು ರವಾನೆ ಕಾರ್ಯದೊಂದಿಗೆ ವಿಭಾಗ ಕಛೇರಿಯಿಂದ ನೀಡುವ ಅಳತೆ ಪುಸ್ತಕಗಳು, ನಾಮಾಂಕಿತ ಸಮುದಾಯ ಹಾಜರಾತಿ ಪಟ್ಟಿ ಇವುಗಳ ದಾಖಲೆಗಳ ನಿರ್ವಹಣೆ ಹಾಗೂ ಅಂಚೆ ಚೀಟಿಗಳ ದಾಸ್ತಾನು ನಿರ್ವಹಣೆ ನಿರ್ವಹಿಸುತ್ತಾರೆ. ಇದರೊಂದಿಗೆ ವಾರ್ಷಿಕ ತಪಾಸಣಾ ವರದಿಗಳಿಗೆ ಪಾಲನಾ ವರದಿಯನ್ನು ಕ್ರೋಢಿಕರಿಸಿ ಸಲ್ಲಿಸುವ ಕಾರ್ಯನಿರ್ವಹಿಸುತ್ತಾರೆ.

**3. ಲೆಕ್ಕಪತ್ರ ಶಾಖೆ:**

ಈ ಶಾಖೆಯಲ್ಲಿ ಒಬ್ಬ ಪ್ರಥಮ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಾರೆ. ಉಪ–ವಿಭಾಗಕ್ಕೆ ಸಂಬಂಧಪಟ್ಟಂತೆ ಕಾಮಗಾರಿಗಳ ನಗದು ಪುಸ್ತಕಗಳ ನಿರ್ವಹಣೆ, ಬಾಕಿ ಬಿಲ್ಲುಗಳ ಪರಿಶೀಲನೆಯೊಂದಿಗೆ ವಿಭಾಗ ಕಛೇರಿಗೆ ಸಲ್ಲಿಸುವುದು. ಹಣ ಭರವಸೆ ಪತ್ರ, ಬೇಡಿಕೆ ಪತ್ರ ಸಲ್ಲಿಸುವುದು. ಇದಲ್ಲದೇ ಲೆಕ್ಕ ಪತ್ರ ಶಾಖೆಗೆ ಸಂಬಂಧಿಸಿದ ಎಲ್ಲ ಪತ್ರ ವ್ಯವಹಾರಗಳನ್ನು ನಿರ್ವಹಿಸುವುದು.

**4. ಉಗ್ರಾಣ ಶಾಖೆ:**

ಈ ಇಲಾಖೆಯಲ್ಲಿ ಒಬ್ಬ ದ್ವಿತೀಯ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಿದ್ದಾರೆ. ದಾಸ್ತಾನು ಸಾಮಗ್ರಿಗಳ ಹಾಗೂ ಯಂತ್ರೋಪಕರಣ ಸಾಮಗ್ರಿಗಳು ಹಾಗೂ ಸ್ಥಿರ ಸಾಮಗ್ರಿಗಳ ಪತ್ರ ವ್ಯವಹಾರ ಹಾಗೂ ಅವಶ್ಯವಿದ್ದಲ್ಲಿ ವಿಭಾಗ ಕಛೇರಿಗೆ ಬೇಡಿಕೆ ಪತ್ರ ಸಲ್ಲಿಸುವುದು. ಕಛೇರಿಗೆ ಅವಶ್ಯವಿರುವ ಲೇಖನಿ ಸಾಮಗ್ರಿಗಳನ್ನು ಖರೀದಿಸುವುದು, ನಿರುಪಯುಕ್ತ ಸಾಮಗ್ರಿಗಳ ಬಗ್ಗೆ ಸರ್ವೆ ವರದಿಯನ್ನು ಸಲ್ಲಿಸುವುದು. ಉಗ್ರಾಣಕ್ಕೆ ಸಂಬಂಧಪಟ್ಟ ಲೆಕ್ಕ ಪತ್ರ ಮಾಹಿತಿಯನ್ನು ವಿಭಾಗ ಕಛೇರಿಗೆ ಸಲ್ಲಿಸುವುದು.

**ಕೈಪಿಡಿ–2**

**ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ.**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ–ವಿಭಾಗ, ರಾಣೇಬೆನ್ನೂರು ಇವರು ಉಪ–ವಿಭಾಗದ ಮುಖ್ಯಸ್ಥರಿದ್ದು, ಇವರು ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ, ಹಾವೇರಿ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಾರೆ.

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರ ಕಾರ್ಯಭಾರ ಈ ಕೆಳಗಿನಂತಿರುತ್ತದೆ.

1) ಪ್ರತಿಯೊಂದು ಉಪ–ವಿಭಾಗದ ಮುಖ್ಯಸ್ಥರಾಗಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರು ಇರುತ್ತಾರೆ. ಇವರು ಉಪ–ವಿಭಾಗದ ಕಾಮಗಾರಿಗಳ ಶೇ.100 ರಷ್ಟು ಪರಿಶೀಲನೆ ಮಾಡಬೇಕಾಗುತ್ತದೆ.

2) ಮೇಲಾಧಿಕಾರಿಗಳು ನೀಡಿರುವ ತಪಾಸಣೆಯ ಟಿಪ್ಪಣಿಗಳಿಗೆ ತ್ವರಿತವಾಗಿ ಅನುಸರಣಾ ವರದಿಯ ನಿಯಮಾವಳಿಗಳಂತೆ ಸಲ್ಲಿಸುವುದು.

3) ಉಪ–ವಿಭಾಗ ಸಿಬ್ಬಂದಿ, ಲೆಕ್ಕ ವಿಚಾರಗಳು ಮತ್ತು ತಾಂತ್ರಿಕ ವಿಚಾರಗಳು, ಉಗ್ರಾಣದ ಲೆಕ್ಕ ವಿಚಾರಗಳು, ಈ ಎಲ್ಲವನ್ನು ನಿರ್ವಹಿಸುವಲ್ಲಿ ಅವರೇ ಜವಾಬ್ದಾರರಾಗಿರುತ್ತಾರೆ.

4) ಉಪ–ವಿಭಾಗದಲ್ಲಿ ಶಾಖಾಧಿಕಾರಿಗಳು ಇರುವುದಿಲ್ಲ. ಅವರ ಅಧೀನದಲ್ಲಿ ಪ್ರಥಮ ದರ್ಜೆ ಸಹಾಯಕರ ದ್ವಿತೀಯ ದರ್ಜೆ ಸಹಾಯಕರು, ಸಹಾಯಕ ಇಂಜಿನೀಯರ್, ಕಿರಿಯ ಇಂಜಿನೀಯರ್, ಬೆರಳಚ್ಚುಗಾರರು ಉಪವಿಭಾಗದ ಕೆಲಸಗಳನ್ನು ಜವಾಬ್ದಾರಿಯುತರಾಗಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರಿಗೆ ಕೆಲಸ ನಿರ್ವಹಿಸಲು ಸಹಾಯಕರಾಗಿರುತ್ತಾರೆ.

5) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು, ಕಾರ್ಯನಿರ್ವಾಹಕ ಇಂಜಿನೀಯರವರಿಗೆ ಮಾಹಿತಿಯನ್ನು ನಿಗದಿತ ದಿನಾಂಕದೊಳಗೆ ಎಲ್ಲಾ ನಿಯತಕಾಲಿಕೆಗಳನ್ನು ನಿಯಮಾನುಸಾರ ಸಲ್ಲಿಸಲು ಕ್ರಮ ತೆಗೆದುಕೊಳ್ಳುವುದು.

6) ಕಾಮಗಾರಿಗಳ ಅಂದಾಜು ತಯಾರಿಕೆ, ಕರಡು ಟೆಂಡರ್ ಪತ್ರಗಳ ತಯಾರಿಕೆ, ಗುತ್ತಿಗೆದಾರರಿಗೆ ನಿವೇಶನ ಇತರ ಕಾಮಗಾರಿಗಳ ಮಾರ್ಕ್ ಔಟ್ ಮಾಡುವ ಬಗ್ಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರು ಕ್ರಮ ತೆಗೆದುಕೊಳ್ಳಬೇಕಾಗುತ್ತದೆ.

ಸಹಾಯಕ ಇಂಜಿನೀಯರ್/ ಕಿರಿಯ ಇಂಜಿನೀಯರ್‌ರವರುಗಳು ತಾಂತ್ರಿಕ ವಿಚಾರಗಳು, ಶಾಖಾ ಲೆಕ್ಕಗಳು, ಮತ್ತು ಪಿ ಲೆಕ್ಕಗಳು, ಎಂ.ಇ.ಎಸ್. ಲೆಕ್ಕಗಳು ಮತ್ತು ಇತರೇ ವಾಹನಗಳ ಲೆಕ್ಕಗಳನ್ನು ನಿರ್ವಹಿಸುವುದು. ಇವರುಗಳ ಬಿಲ್ಲು ತಯಾರಿಕೆಗಳನ್ನು ನಿರ್ವಹಿಸುವುದು ಅಲ್ಲದೇ ಪುಸ್ತಕಗಳಲ್ಲಿ ಕಾಮಗಾರಿಗಳ ವಿವರಗಳನ್ನು ಮತ್ತು ಅಳತೆಗಳನ್ನು ನಮೂದಿಸಿ

ಗುತ್ತಿಗೆದಾರರಿಗೆ ಬಿಲ್ಲು ಪಾವತಿಸುವಲ್ಲಿ ಸರ್ಕಾರವು ನಿಗದಿಪಡಿಸಿದ ಸಮಯದೊಳಗೆ ಪಾವತಿಯಾಗುವಂತೆ ಕ್ರಮ ತೆಗೆದುಕೊಳ್ಳುವುದು.

**ಕೈಪಿಡಿ–3**

**ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಹಾಗೂ ಜವಾಬ್ದಾರಿ ವಿವರಗಳನ್ನು ಇಲಾಖೆಯು ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ.**

ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2 ಕರ್ನಾಟಕ ಪಾರದರ್ಶಕ ನಿಯಮ ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.

ಭೂ ಸ್ವಾಧೀನ ಕಾಯ್ದೆ

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

**ಆಡಳಿತವನ್ನು ನಿರ್ವಹಿಸಲು**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು

ಕರ್ನಾಟಕ ಆರ್ಥಿಕ ಸಂಹಿತೆ

ಕರ್ನಾಟಕ ಖಜಾನಾ ಸಂಹಿತೆ

ಈ ಇಲಾಖೆಯಲ್ಲಿ ನಿರ್ವಹಿಸಲ್ಪಡುವ ಎಲ್ಲ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕ ನಿಯಮದ ಅನುಸಾರ ಟೆಂಡರ್ ಕರೆದು ಗುತ್ತಿಗೆದಾರರಿಗೆ ನೀಡಲಾಗುತ್ತಿದೆ. ಗುತ್ತಿಗೆದಾರರನ್ನು ನಿಗದಿಪಡಿಸಿದ ನಂತರ ಅವರಿಗೆ ಕಾರ್ಯಾದೇಶ ನೀಡಲಾಗುತ್ತಿದೆ. ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು ಗುತ್ತಿಗೆದಾರರಿಗೆ ನಿವೇಶನವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಮಾರ್ಕ್ ಔಟ್ ನೀಡಿ ಕೆಲಸ ಚಾಲನೆ ಮಾಡುತ್ತಾರೆ. ಸಂಬಂಧಿಸಿದ ಸಹಾಯಕ/ ಕಿರಿಯ ಇಂಜಿನೀಯರರು ದೈನಂದಿನ ನಿವೇಶನಕ್ಕೆ ಹೋಗಿ ಕೆಲಸದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರು ಆಗಿಂದಾಗ್ಗೆ ನಿವೇಶನಕ್ಕೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ ಕಾರ್ಯನಿರ್ವಾಹಕ ಇಂಜಿನೀಯರರು, ಅಧೀಕ್ಷಕ ಇಂಜಿನೀಯರರು, ಮುಖ್ಯ ಇಂಜಿನೀಯರರು ನಿವೇಶನಕ್ಕೆ ಭೇಟಿ ನೀಡಿ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಕಾರ್ಯನಿರ್ವಾಹಕ ಇಂಜಿನೀಯರರು, ಅಧೀಕ್ಷಕ ಇಂಜಿನೀಯರರು ಮತ್ತು ಮುಖ್ಯ ಇಂಜಿನೀಯರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತದೆ.

ಅಕೌಂಟ್ ಟೆಬಿಲಿಟಿ ಬಗ್ಗೆ ಮಹಾಲೇಖಾಪಾಲಕರು 2 ವರ್ಷಕ್ಕೊಮ್ಮೆ ಸಂಬಂಧಿತ ಉಪ–ವಿಭಾಗ ಕಛೇರಿಗಳ ಪರಿವೀಕ್ಷಣೆ ಮಾಡುತ್ತಾರೆ. ಅಲ್ಲದೇ ಮುಖ್ಯ ಇಂಜಿನೀಯರವರ ಕಛೇರಿ, ಅಧೀಕ್ಷಕ ಇಂಜಿನೀಯರವರ ಕಛೇರಿ, ಕಾರ್ಯ ನಿರ್ವಾಹಕ ಇಂಜಿನೀಯರವರ ಕಛೇರಿಯಿಂದಲೂ ಉಪ–ವಿಭಾಗಗಳ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರು ಕೂಡ ನಿವೇಶನವನ್ನು ಪರಿಶೀಲನೆ ಮಾಡಿ ಏನಾದರೂ ಕಳಪೆ ಕಾಮಗಾರಿ ಇದ್ದಲ್ಲಿ ಸೂಕ್ತ ಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

**ಕೈಪಿಡಿ–4**

**ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು:**

ಲೋಕೋಪಯೋಗಿ ಇಲಾಖೆ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ

ಸರ್ಕಾರಿ ಆದೇಶ ಸಂಖ್ಯೆ: ಪಿಡಬ್ಲ್ಯೂ–1/ಎಫ್‌ಸಿಆರ್ 93/ಬೆಂಗಳೂರು ದಿನಾಂಕ:15.12.1994

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ

ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ–1/ ಟಿಎಫ್‌ಪಿ 2001 ಬೆಂಗಳೂರು ದಿನಾಂಕ:02.02.2001

ಲೋಕೋಪಯೋಗಿ ಇಲಾಖೆ ಸಂಹಿತೆ

ಲೋಕೋಪಯೋಗಿ ಇಲಾಖೆ ಆರ್ಥಿಕ ಸಂಹಿತೆ.

**ಕೈಪಿಡಿ–5**

**ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು, ಸೂಚನೆಗಳು, ದಾಖಲೆಗಳು ಕೈಪಿಡಿಗಳ ವಿವರ.**

ಕಛೇರಿ ಕೈಪಿಡಿ ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು

